# PACKAGE TOURS 2018

**Hotel Room Accom. & South Indian Veg. Food**

## Mini Andhra : 05 Days
**Mar 04**

Mantralaya, Srishaila, Mahanandi, Ahobilam (Nava Narasimha)

## Kashi Gaya Chitrakoot : 11/14 Days
**Mar 23**

Allahabad, Gaya, Bodhgaya, Kashi, Saranath, Ayodhya, Naimisharanya, Chitrakoot

## North East India : 14/20 Days
**Apr 20**

Guwahati, Kamakhya, Kaziranga, Shillong, Cherrapunjee, Dawki, Bomdilla, Sela Pass, Tawang, Bhalukpong

## Kolkata Darjeeling : 13/16 Days
**Apr 03**

Bhubaneshwar, Puri, Konark, Chilka Lake, Kolkata, Siliguri, Gangtok, Chengu Lake, Harbhajan Singh Mandir, Darjeeling, Tiger Hills

## Shaktipeetha Manali Special : 14/18 Days
**Apr 18**

Attari Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## Charodham Yatra : 15/19 Days
**May 21 June 06 Sep 19 Oct 04, 20**

Haridwar, Yamunotri, Gangotri, Uttarkashi, Kedarnath, Triyugi (Optional), Mana, Vyasa Guha, Ganesh Guha, Keshava Prayag, Badrinath, Rishikesh, New Delhi







# Shri Hansaa Travels

**Recognised by Department of Tourism, Govt. of Karnataka**

: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612



# ವಿವೇಕಪ್ರಭ

ಮಾರ್ಚ್-2018 ಸಂಪುಟ 19 ಸಂಚಿಕೆ 03



## ವಿಶೇಷ ಲೇಖನ



## ಧಾರಾವಾಹಿ













ವ್ಯವಸ್ಥಾಪಕ ಸಂಪಾದಕರು: *ಸ್ವಾಮಿ ಆತ್ಮಜ್ಞಾನಂದ* ಸಂಪಾದಕರು: *ಸ್ವಾಮಿ ಜ್ಞಾನಯೋಗಾನಂದ*

ನೆರವು: *ಆರ್. ಎಸ್. ಪೂರ್ಣಾನಂದ, ಡಾ. ಕೆ. ಎಲ್. ಪ್ರಸನ್ನಾಕ್ಷೀ, ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ: *ಶ್ರೀರಾಮಕೃಷ್ಣ ಆಶ್ರಮ, ಮೈಸೂರು* ಮುದ್ರಣ: *ಮಯೂರ್ ಗ್ರಾಫಿಕ್ಸ್, ಬೆಂಗಳೂರು*


ಮುಖಪುಟ
'ರಾಗಿಣಿ ವಸಂತ'
ರಾಗಮಾಲಾ ಚಿತ್ರ


### ಚಂದಾ ವಿವರ

ಬಿಡಿ ಪ್ರತಿ : ₹14 ವಾರ್ಷಿಕ : ₹ 140 ಮೂರು ವರ್ಷ : ₹ 375
ಆಜೀವ (25 ವರ್ಷ) : ₹3,000 ಪೋಷಕರು : ₹5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್) ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300 ಪೋಷಕರು : $ 600 ಅಥವಾ ಹೆಚ್ಚು.


### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ


ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.



E-mail: mysuru.vivekaprabha@rkmm.org Website: www.vivekaprabha.net ಫೋನ್ : 9481533505

## ಪ್ರಾರ್ಥನೆ

# ಶ್ರೀ ರಾಮಮಾನಸ ಸ್ತೋತ್ರಮ್ – ೧

ಶ್ರೀಮನ್ನುಜ್ಜ್ವಲ ಕೋಟಿ ಭಾನುಸದೃಶಂ ಮಂದಸ್ಮಿತಂ ಶ್ಯಾಮಲಂ ।
ಶ್ರೀಸೀತಾಸಹಿತಂ ವರಾಭಯಕರಂ ವಾಮೇ ಸುಮಿತ್ರಾಸುತಮ್ ॥
ಶ್ರೀವತ್ಸಾಂಕಧನುಃಶರಾದಿ ಲಸಿತಂ ವಾತಾತ್ಮಜಾಭಿಷ್ಟುತಂ ।
ಶ್ರೀರಾಮೇತಿ ಪದದ್ವಯಾನ್ವಿತಮಹಂ ಧ್ಯಾಯೇ ಮನೋಮಂದಿರೇ ॥ ೧ ॥

ಕೋಟಿಸೂರ್ಯ ತೇಜಸ್ಸುಳ್ಳ, ಮಂದಸ್ಮಿತನಾದ, ಶ್ಯಾಮಲ ವರ್ಣದ, ಸೀತಾದೇವಿಯಿಂದೊಡಗೂಡಿದ, ಶ್ರೇಷ್ಠ ಅಭಯಹಸ್ತದಿಂದ ಕೂಡಿದ, ಎಡಭಾಗದಲ್ಲಿ ಸುಮಿತ್ರೆಯ ಪುತ್ರ ಲಕ್ಷ್ಮಣನಿಂದ ಕೂಡಿರುವ, ಶ್ರೀವತ್ಸ-ಬಿಲ್ಲು-ಬಾಣಗಳಿಂದ ಅಲಂಕೃತನಾದ, ಮಾರುತಿಯಿಂದ ಸ್ತುತಿಸಲ್ಪಡುತ್ತಿರುವ 'ಶ್ರೀ' ಮತ್ತು 'ರಾಮ' ಎಂಬ ಎರಡು ಪದಗಳಿಂದ ಕೂಡಿದ ಶ್ರೀರಾಮಚಂದ್ರನನ್ನು ನನ್ನ ಹೃದಯಮಂದಿರದಲ್ಲಿ ಪೂಜಿಸುತ್ತೇನೆ.

ರಾಮೇತ್ಯೇಕರಸ-ಸ್ವರೂಪಮಮಲಂ ಲೀಲಾವತಾರಾವ್ಯಯಂ ।
ರಾಜೇಂದ್ರಂ ರಘುನಂದನಂ ರವಿಕುಲೋದ್ಭೂತಂ ಸಮಾವಾಹಯೇ ॥
ರಾಜೇಷ್ಟಂ ರಮಣೀಯಮರ್ಪಿತಮಿದಂ ಮಾಣಿಕ್ಯಸಿಂಹಾಸನಂ ।
ಪಾದ್ಯಂ ಸಾಚಮನೀಯಮರ್ಘ್ಯಮಮೃತಂ ರಾಮ ಸ್ವಯಂ ಸ್ವೀಕುರು ॥ ೨ ॥

ರಾಮನೆಂಬ ನಿರ್ಮಲವಾದ, ಅವಿನಾಶಿಯಾದ, ಏಕರಸ ಸ್ವರೂಪನನ್ನು, ಲೀಲಾವತಾರಿಯೂ, ರಾಜೇಂದ್ರನೂ, ರಘುನಂದನನೂ, ರವಿಕುಲದಲ್ಲಿ ಜನಿಸಿದವನೂ ಆದ ಶ್ರೀರಾಮನನ್ನು ಆಹ್ವಾನಿಸುತ್ತೇನೆ. ರಾಜರಿಗೆ ಪ್ರಿಯನಾದವನಿಗೆ ಈ ರಮಣೀಯವಾದ ಮಾಣಿಕ್ಯ ಸಿಂಹಾಸನವು (ಹೃದಯ) ಅರ್ಪಿತವಾಗಿದೆ. ಹೇ ಶ್ರೀರಾಮನೆ, ಪಾದಪ್ರಕ್ಷಾಲನೆ- ಅರ್ಚನೆಗಳಿಗೆ ಹೀಗೆ ಅರ್ಪಿತವಾದ ಜಲವನ್ನು ಸ್ವೀಕರಿಸು.



ಮಧ್ವಕ್ತಂ ಮಧುಪರ್ಕಮಂತ್ರಪಠಿತಂ ಪಂಚಾಮೃತಂ ಕಲ್ಪಿತಂ ।
ಮಂದಾಕಿನ್ಯಾಮಿದಂ ಸುರತ್ನಕಲಶೈಃ ಸ್ನಾನಾರ್ಥಮಪ್ಯಾಹೃತಮ್ ॥
ಮಂದಾರಾಮರ ಪಾರಿಜಾತತಲಗೇ ಸೌವರ್ಣಪೀಠೇ ಸ್ಥಿತಂ ।
ಮಂತ್ರೈಸ್ತ್ವಾಭಿಷೇಚಯಾಮಿ ವಿವಿಧೈಃ ಸೂಕ್ತೈಃ ಸುತೀರ್ಥೋದಕೈಃ ॥ ೩ ॥

ಮಧುಪರ್ಕದ ಮಂತ್ರ ಪಠಿಸುತ್ತಾ ಮಧುಮಿಶ್ರಿತ ಪಂಚಾಮೃತವು ಕಲ್ಪಿಸಲ್ಪಟ್ಟಿದೆ; ರತ್ನಗಳಿಂದ ಅಲಂಕೃತವಾದ ಕೊಡಗಳಲ್ಲಿ ಸ್ನಾನ ಮಾಡಲು ಮಂದಾಕಿನಿಯ ಜಲವನ್ನು ತಂದಿರಿಸಿದೆ. ಮಂದಾರ, ಪಾರಿಜಾತ, ಕಲ್ಪತರು ವೃಕ್ಷಗಣಗಳ ಕೆಳಗೆ ಇಟ್ಟಿರುವ ಕನಕಪೀಠದಲ್ಲಿ ಕುಳ್ಳಿರಿಸಿ, ಅನೇಕ ಸೂಕ್ತ-ಮಂತ್ರಗಳಿಂದ, ಉತ್ತಮ ತೀರ್ಥಗಳಿಂದ ನಿನ್ನ ಅಭಿಷೇಕವನ್ನು ಮಾಡುತ್ತೇನೆ.

— ಶ್ರೀ ಶಂಕರಾಚಾರ್ಯ

## ಸೂಕ್ತಿಪ್ರಭ

### ಪ್ರಾಚೀನ ಸೂಕ್ತಿಗಳು

ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।
ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥

ಕುಲದ ಹಿತಕ್ಕಾಗಿ ಒಬ್ಬನನ್ನು ತ್ಯಾಗ ಮಾಡಬೇಕು. ಗ್ರಾಮದ ಹಿತಕ್ಕಾಗಿ ಕುಲವನ್ನೂ, ದೇಶದ ಹಿತಕ್ಕಾಗಿ ಗ್ರಾಮವನ್ನೂ, ಆತ್ಮನ ಹಿತಕ್ಕಾಗಿ ಪೃಥ್ವಿಯನ್ನೂ ತ್ಯಾಗ ಮಾಡಬೇಕು.

— ಹಿತೋಪದೇಶ

ನ ತಥ್ಯವಚನಂ ಸತ್ಯಂ ನಾತಥ್ಯವಚನಂ ಮೃಷಾ ।
ಯದಭೂತಹಿತಮತ್ಯಂತಂ ತತ್ಸತ್ಯಮಿತರನ್ಮೃಷಾ ॥

ನಿಜವಾದದ್ದನ್ನು ಹೇಳುವ ಮಾತು ಸತ್ಯವಲ್ಲ; ನಿಜವಲ್ಲದುದನ್ನು ಹೇಳುವ ಮಾತು ಸುಳ್ಳಲ್ಲ. ಯಾವುದು ಜೀವಿಗಳಿಗೆ ಅಂತಿಮವಾಗಿ ಹಿತವನ್ನು ಉಂಟುಮಾಡುವುದೋ ಅದು ಸತ್ಯ; ಹಾಗೆ ಮಾಡದುದು ಸುಳ್ಳು.

— ಸುಭಾಷಿತಸುಧಾನಿಧಿ

ನಾಸ್ತಿ ವಿದ್ಯಾಸಮಂ ಚಕ್ಷುರ್ನಾಸ್ತಿ ಸತ್ಯಸಮಂ ತಪಃ ।
ನಾಸ್ತಿ ರಾಗಸಮಂ ದುಃಖಂ ನಾಸ್ತಿ ತ್ಯಾಗಸಮಂ ಸುಖಮ್ ॥

ವಿದ್ಯೆಗೆ ಸಮವಾದ ಇನ್ನೊಂದು ಕಣ್ಣು ಇಲ್ಲ. ಸತ್ಯಕ್ಕೆ ಸಮವಾದ ತಪಸ್ಸಿಲ್ಲ. ಆಸಕ್ತಿಗೆ ಸಮವಾದ ದುಃಖವಿಲ್ಲ. ತ್ಯಾಗಕ್ಕೆ ಸಮವಾದ ಸುಖವಿಲ್ಲ.

— ಮಹಾಭಾರತ

ನೇಹ ಯತ್ಕರ್ಮ ಧರ್ಮಾಯ ನ ವಿರಾಗಾಯ ಕಲ್ಪತೇ ।
ನ ತೀರ್ಥಪದಸೇವಾಯೈ ಜೀವನ್ನಪಿ ಮೃತೋ ಹಿ ಸಃ ॥

ಈ ಲೋಕದಲ್ಲಿ ಯಾರ ಕೆಲಸವು ಧರ್ಮಸಾಧನೆಗಾಗಿ ಅಲ್ಲವೋ, ವೈರಾಗ್ಯಕ್ಕಾಗಿ ಅಲ್ಲವೋ, ಅಥವಾ ಪೂಜ್ಯರ ಸೇವೆಗಾಗಿ ಅಲ್ಲವೋ, ಆ ಮನುಷ್ಯನು ಬದುಕಿದ್ದರೂ ಸತ್ತಂತೆಯೇ.

— ಭಾಗವತ

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ).

**ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.**
**ಎಂ.ಎಲ್.ಹಳ್ಳಿ, ಸಾಗರ ತಾಲೂಕು,**
**ಶಿವಮೊಗ್ಗ ಜಿಲ್ಲೆ. ಫೋನ್: 08183-296516**
**9449921950, 9449774451**

**ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ**
**ಐ.ಬಿ. ಹತ್ತಿರ, ಹೊಸನಗರ-577418**
**ಶಿವಮೊಗ್ಗ ಜಿಲ್ಲೆ ಫೋನ್: 08185-221915**
**9449921950**

**(CBSE & State Syllabus)**

ಮಾನ್ಯ ವಿದ್ಯಾಕಾಂಕ್ಷಿಗಳೇ.

**"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸಖಂಡಗಳು, ಉಕ್ಕಿನಂತಹ ನರಗಳು, ಯಾವುದಕ್ಕೂ ಜಗ್ಗದ ಪ್ರಚಂಡ ಇಚ್ಛಾಶಕ್ತಿಯಿರುವ ಸಿಂಹ ಸದೃಶ ವ್ಯಕ್ತಿಗಳು. ಇಂತಹ ವ್ಯಕ್ತಿಗಳ ನಿರ್ಮಾಣ, ಸಮಗ್ರ ಶಿಕ್ಷಣದಿಂದ ಮಾತ್ರ ಸಾಧ್ಯ"** ಎಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯಪಟ್ಟಿದ್ದಾರೆ. ಇಂತಹ ಶಿಕ್ಷಣದ ಧ್ಯೇಯವನ್ನಿಟ್ಟುಕೊಂಡು ಧೀಮಂತ ಸುಸಂಸ್ಕೃತ, ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣವನ್ನು ನೀಡುತ್ತಿವೆ, ಮೇಲ್ಕಂಡ ಶ್ರೀ ರಾಮಕೃಷ್ಣ ವಿದ್ಯಾಸಂಸ್ಥೆಗಳು.



ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ವಸತಿ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕ್ರಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ಸಂಸ್ಥೆಗಳು ಮಕ್ಕಳನ್ನು ಅಕ್ಕರೆಯಿಂದ, ಮಮತೆಯಿಂದ ಪೋಷಿಸಿ ಅವರ ಅಂತರಂಗದಲ್ಲಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನು ರೂಪಿಸುತ್ತಿವೆ. ದೇಶಾದ್ಯಂತ ಖ್ಯಾತಿ ಹೊಂದಿರುವ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:-** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಾಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :-** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:-** ಎಲ್.ಕೆ.ಜಿ. ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಮತ್ತು ಸಿಬಿಎಸ್ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:-**
* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವಂತೆ ಮಾಡುತ್ತಿರುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದು.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿ ವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ ಪಡೆಯುತ್ತಿರುವುದು.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ ವಹಿಸಿರುವುದು.

5) **ವಸತಿ ಶಾಲೆಗೆ ಪ್ರವೇಶ:-**
* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ.
* CBSE & State Syllabus
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿದೆ.

6) **ಪ್ರವೇಶ ಕ್ರಮ:-**
* ಪ್ರವೇಶ ಪರೀಕ್ಷೆ, ಸಂದರ್ಶನ ಆಧಾರದ ಮೇಲೆ.
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಅನ್ನು ರೂ. 200 ಡಿ.ಡಿ. ಮೂಲಕ **ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್** (ರಿ) ಹೆಸರಿಗೆ ಕಳುಹಿಸಿ ಪಡೆಯಬಹುದು.
* ಪ್ರವೇಶ ಪರೀಕ್ಷೆ : ಹೊಸನಗರದಲ್ಲಿ ದಿ. 29-04-2018 ರಂದು ಬೆಳಿಗ್ಗೆ 10ಕ್ಕೆ.
  : ಎಂ.ಎಲ್. ಹಳ್ಳಿ ಸಾಗರದಲ್ಲಿ ದಿ. 02-05-2018 ರಂದು ಬೆಳಗ್ಗೆ10ಕ್ಕೆ

ಹೆಚ್ಚಿನ ಮಾಹಿತಿಗೆ ಶಾಲೆಯನ್ನು ಸಂಪರ್ಕಿಸಿ:
http://ramakrishnagurukulaashramasag.in/

ವ್ಯವಸ್ಥಾಪಕರು

ನಮ್ಮ CBSE ಶಾಲೆಗಳು : 1. Sri Ramakrishna Vivekananda Residential International School, M.L.Halli, Sagar
2. Sri Ramakrishna Residential School, Hosanagara.










# ರಾಮಕೃಷ್ಣ ಮಿಷನ್ ಆಶ್ರಮ

(ರಾಮಕೃಷ್ಣ ಮಿಷನ್, ಬೇಲೂರು ಮಠ, ಹೌರಾ 711 002 ಇದರ ಒಂದು ಶಾಖಾಕೇಂದ್ರ)

**ಮಿಷನ್ ರಸ್ತೆ , ಆಶ್ರಮಪಾರಾ, ಜಲಪಾಯಿಗುರಿ –735101 ಪಶ್ಚಿಮ ಬಂಗಾಳ**

Phone: **8902051967, 9434344492, 03561-228388/228945**, Email: **rkmajal@gmail.com** Website: **www.rkmjalpaiguri.in**

## ಒಂದು ವಿಜ್ಞಾಪನೆ

''ಯಾರು ಇತರರಿಗಾಗಿ ಬದುಕುವರೋ, ಅವರೇ ನಿಜವಾಗಿ ಬದುಕುವವರು''

— ಸ್ವಾಮಿ ವಿವೇಕಾನಂದ

ಸ್ನೇಹಿತರೇ ಹಾಗೂ ಭಕ್ತರೇ,

ಸ್ವಾಮಿ ವಿವೇಕಾನಂದರ ಕಹಳೆ ಧ್ವನಿಗೆ ಓಗೊಟ್ಟು 1928ರಲ್ಲಿ **ಜಲಪಾಯಿಗುರಿ** ಪಟ್ಟಣದಲ್ಲಿ ಕೆಲವು ಭಕ್ತರು ಒಂದು ಆಶ್ರಮವನ್ನು ಆರಂಭಿಸಿದರು. 1941ರಲ್ಲಿ ಅದು ಬೇಲೂರು ಮಠದ ರಾಮಕೃಷ್ಣ ಮಿಷನ್‌ನ ಶಾಖಾಕೇಂದ್ರವಾಗಿ ಸೇರ್ಪಡೆಗೊಂಡಿತು. ಹಿಮಾಲಯ ಪರ್ವತ ಶ್ರೇಣಿಯ ಕೆಳಗಿನ ಹಂತದ ತಪ್ಪಲು ಪ್ರದೇಶದಲ್ಲಿ ನೆಲೆಸಿರುವ ಈ ಆಶ್ರಮವು **ನಾಲ್ಕು ರಾಷ್ಟ್ರಗಳ ನಡುವಿನ ವಿಶಿಷ್ಟ ಭೂಪ್ರದೇಶದಲ್ಲಿ** ನೆಲೆಸಿದೆ. ಹಚ್ಚಹಸಿರಿನ ರಮಣೀಯ ನೈಸರ್ಗಿಕ ಸಮೃದ್ಧಿಯಿಂದ ಕೂಡಿದ ಈ ಆಶ್ರಮವು ಸಮೀಪದ ಹಾಗೂ ದೂರದ ಅನೇಕ ಮಂದಿ ಸಾಧಕರನ್ನು ತನ್ನೆಡೆಗೆ ಆಕರ್ಷಿಸುತ್ತಿದೆ. ಸೇವಾ ಕಾರ್ಯಗಳಲ್ಲಿ ವಿದ್ಯಾರ್ಥಿ ಮಂದಿರ, ಮೌಲ್ಯ ಶಿಕ್ಷಕ ತರಬೇತಿ, ಏಕೀಕೃತ ಶಿಶು ಅಭಿವೃದ್ಧಿ ಯೋಜನೆ, ಉಚಿತ ಚಿಕಿತ್ಸಾಲಯ, ಗ್ರಂಥಾಲಯ ಹಾಗೂ ವಾಚನಾಲಯ, ಪರಿಹಾರ ಮತ್ತು ಅಭಿವೃದ್ಧಿ ಕಾರ್ಯಗಳು ಹಾಗೂ ಇನ್ನಿತರ ಯೋಜನೆಗಳು ಪ್ರಮುಖವಾಗಿವೆ.



ಸ್ವಾಮಿ ವಿವೇಕಾನಂದರು 1893ರ ಸೆಪ್ಟೆಂಬರ್ 11ರಂದು ಚಿಕಾಗೋದಲ್ಲಿ ನೀಡಿದ ನಿತ್ಯ ಸ್ಮರಣಾರ್ಹವೂ ಅತ್ಯಮೋಘವೂ ಆದ ಉಪನ್ಯಾಸಗಳು ನಡೆದ 'ಆರ್ಟ್ ಇನ್‌ಸ್ಟಿಟ್ಯೂಟ್'ಅನ್ನು ಹೋಲುವ '**ವಿವೇಕಾನಂದ ಸಭಾಗೃಹ**'ದ ನಿರ್ಮಾಣ ಮಾಡುವ ಯೋಜನೆಯನ್ನು ನಾವು ಹಾಕಿಕೊಂಡಿದ್ದೇವೆ. (ಅದರ ಮಾದರಿಯು ಚಿತ್ರದಲ್ಲಿದೆ.) ಈ ಬಹೂಪಯೋಗಿ ಕಟ್ಟಡವು 16,000 ಚದರಡಿ ಅಳತೆಯಷ್ಟು ವಿಶಾಲವಾಗಿದ್ದು, ಸುಮಾರು 1300 ಮಂದಿ ಕುಳಿತುಕೊಳ್ಳಬಹುದಾಗಿದೆ. ವಿದ್ಯಾರ್ಥಿಗಳಿಗೆ, ಯುವಕರಿಗೆ ಹಾಗೂ ಸಾರ್ವಜನಿಕರಿಗೆ ವಿಚಾರ ಸಂಕಿರಣ, ಸಭೆ–ಸಮಾರಂಭಗಳನ್ನು ಏರ್ಪಡಿಸಲು, ಮೌಲ್ಯಶಿಕ್ಷಣ ಸಾಂಸ್ಕೃತಿಕ ಆಧ್ಯಾತ್ಮಿಕ ಹಾಗೂ ಸೇವಾ ಕಾರ್ಯಗಳನ್ನು ನಡೆಸಲು ಮತ್ತು ವಿವಿಧ ಹಬ್ಬ–ಹರಿದಿನಗಳನ್ನು ಹಮ್ಮಿಕೊಳ್ಳಲು ಈ ಕಟ್ಟಡ ನೆರವಾಗಲಿದೆ. ವಿಸ್ತಾರ ಉತ್ತರ ಬಂಗಾಳದ ಹಲವು ಪ್ರದೇಶಗಳಿಂದ ಬರುವ ಅಪಾರ ಸಂಖ್ಯೆಯ ಭಕ್ತರುಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಇದರಿಂದ ಸಾಧ್ಯವಾಗುತ್ತದೆ. ಈ ಮೂಲಕ ಸ್ವಾಮಿ ವಿವೇಕಾನಂದರ '**ಮಾನವ – ನಿರ್ಮಾಣ**' ಹಾಗೂ '**ರಾಷ್ಟ್ರ ನಿರ್ಮಾಣ**'ದ ಕನಸನ್ನು ಸಾಕಾರಗೊಳಿಸಲು ಸಾಧ್ಯವಾಗುವುದು ಎಂದು ನಮ್ಮ ನಂಬಿಕೆ. ಇದರ ನಿರ್ಮಾಣಕಾರ್ಯಕ್ಕೆ ಸುಮಾರು 4.66 ಕೋಟಿ ರೂ. ಅಂದಾಜು ವೆಚ್ಚ ತಗಲುವುದು. ಇದಕ್ಕೆ ತಾವು ಉದಾರ ಧನಸಹಾಯ ನೀಡಬೇಕೆಂದು ತಮ್ಮಲ್ಲಿ ನಾವು ವಿನಂತಿಸಿಕೊಳ್ಳುತ್ತಿದ್ದೇವೆ.

ದಾನಿಗಳಲ್ಲಿ ತಮ್ಮ ಪ್ರೀತಿಪಾತ್ರರಾದವರ ಸ್ಮರಣೆಗಾಗಿ ದತ್ತಿ ನೀಡಬಯಸುವವರಿದ್ದರೆ, ಅವರ ಬಯಕೆಯನ್ನು ಈಡೇರಿಸಲು, ಅವರ ಪ್ರೀತಿ ಪಾತ್ರರಾದವರ ಹೆಸರನ್ನು ಸೂಕ್ತ ಸ್ಥಳದಲ್ಲಿ ಫಲಕಗಳ ಮೂಲಕ ಹಾಕಿಸಲಾಗುವುದು. ಆಸಕ್ತ ದಾನಿಗಳು ಈ ಕುರಿತು ಆಶ್ರಮದ ಕಾರ್ಯದರ್ಶಿಯವರನ್ನು ಸಂಪರ್ಕಿಸಬಹುದು. ಅವರ ವಿಳಾಸ: **The Secretary, Ramakrishna Mission Ashrama, Ashramapara, Mission Road, Jalapaiguri - 735101, West Bengal, India.**

ದೇಣಿಗೆಗಳನ್ನು A/C Payee ಚೆಕ್, ಡ್ರಾಫ್ಟ್, ಮನಿ ಆರ್ಡರ್ ಮೂಲಕ ಕಳುಹಿಸಬಹುದು. ಅವುಗಳನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿ, ಸ್ವೀಕೃತಿ ಪತ್ರವನ್ನು ಕಳುಹಿಸುತ್ತೇವೆ. ಚೆಕ್, ಡ್ರಾಫ್ಟ್‌ಗಳನ್ನು ಕಳುಹಿಸಬೇಕಾದ ವಿಳಾಸ: **Ramakrishna Mission Ashrama, Jalapaiguri.**

**ಈ ಧನಸಹಾಯಗಳಿಗೆ 1961ರ ಆದಾಯ ತೆರಿಗೆ ಕಾಯಿದೆಯನ್ವಯ u/s 80-G ತೆರಿಗೆ ವಿನಾಯಿತಿ ಅನ್ವಯವಾಗುತ್ತದೆ.**

| Payment may be made by Bank Transfer (within INDIA) | Payment may be made by Bank Transfer (in respect of Foreign Countries) |
|---|---|
| Bank Details: | Bank Details: |
| State Bank of India, Jalpaiguri Branch, Club Road, Jalpaiguri: 735101 | State Bank of India, **Jalpaiguri Branch, Club Road,** Jalpaiguri: 735101 |
| Savings Bank A/C no. **11188188101**; IFSC Code: **SBINOOOOO95** | savings Bank A/C no. **11188171550**; IFSC Code: **SBINOOOOO95** |
| MICR No: **735002095** Branch Code: **SBI Jalpaiguri** | MICR No: **735002095** Branch Code: **SBI Jalpaiguri** |

**ಆನ್‌ಲೈನ್ ಮೂಲಕ ಹಣಪಾವತಿ:** ಆನ್‌ಲೈನ್ ಮೂಲಕ ಹಣವನ್ನು ವರ್ಗಾಯಿಸಿದ ತಕ್ಷಣವೇ rkmajal@gmail.com ಈ ವಿಳಾಸಕ್ಕೆ ತಮ್ಮ ಹೆಸರು, ಪೂರ್ಣ ಅಂಚೆ ವಿಳಾಸ, PAN No. ಹಾಗೂ ವರ್ಗಾಯಿಸಿದ ಮೊತ್ತ – ಈ ವಿವರಗಳನ್ನು ನಮಗೆ ತಿಳಿಸಲು ಕೋರುತ್ತೇವೆ.

ಈ ಉದಾತ್ತ ಯೋಜನೆಗಾಗಿ ನೀವು ಮಾಡುವ ಧನಸಹಾಯವು ದೂರಗಾಮಿಯೂ, ನಿರ್ಮಾಣಕಾರ್ಯ ಪೂರ್ಣಗೊಳ್ಳುವ ತನಕ ಸಹಕಾರಿಯೂ ಆಗಿರುವುದರಲ್ಲಿ ಯಾವುದೇ ಸಂದೇಹವಿಲ್ಲ.

ಶ್ರೀರಾಮಕೃಷ್ಣರು ನಿಮ್ಮ ಮೇಲೆ ಸದಾ ಕೃಪೆದೋರಿ ಹರಸಲಿ ಎಂಬುದೇ ನಮ್ಮ ಹೃತ್ಪೂರ್ವಕ ಪ್ರಾರ್ಥನೆ.

ಜಲಪಾಯಿಗುರಿ
ಡಿಸೆಂಬರ್ ೯, ೨೦೧೭

ಇತಿ ಭಗವತ್ಸೇವೆಯಲ್ಲಿ ತಮ್ಮ
**ಸ್ವಾಮಿ ಶಿವಪ್ರೇಮಾನಂದ**
ಕಾರ್ಯದರ್ಶಿಗಳು

ಸಂಪಾದಕೀಯ

# ಆತ್ಮಭಾವದ ಬದುಕು

## ಸ್ವಾಮಿ ವಿವೇಕಾನಂದರ ವಾಣಿ

''ವೇದಾಂತದ ಭಾವನೆಗಳು ಹೊರಗೆ ಬರಬೇಕು. ಅವು ಕೇವಲ ಅರಣ್ಯದಲ್ಲಿ ಮತ್ತು ಗಿರಿಗುಹೆಗಳಲ್ಲಿ ಮಾತ್ರ ಇರುವುದಲ್ಲ. ನ್ಯಾಯಾಸ್ಥಾನದಲ್ಲಿ, ಪ್ರಾರ್ಥನಾಲಯದಲ್ಲಿ, ಬಡವನ ಕುಟೀರದಲ್ಲಿ ವೇದಾಂತ ರೂಢಿಗೆ ಬರಬೇಕು. ಮೀನು ಹಿಡಿಯುವ ಬೆಸ್ತರಿಗೂ, ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೂ, ವೇದಾಂತ ಸಹಾಯಕ್ಕೆ ಬರಬೇಕು. ಸ್ತ್ರೀ, ಪುರುಷ, ಬಾಲಕರೆಲ್ಲರೂ, ಅವರೆಲ್ಲಿಯೇ ಇರಲಿ, ಯಾವ ಕೆಲಸವನ್ನೇ ಮಾಡುತ್ತಿರಲಿ, ಎಲ್ಲರಿಗೂ ಇದು ಅನ್ವಯಿಸುವುದು. ಬೆಸ್ತರು ಮುಂತಾದವರು ಹೇಗೆ ಉಪನಿಷತ್ತಿನ ಆದರ್ಶಗಳನ್ನು ಅನುಷ್ಠಾನಕ್ಕೆ ತರಬಲ್ಲರು? ಅದಕ್ಕೆ ಮಾರ್ಗವನ್ನು ತೋರಿರುವರು. ಅದು ಅನಂತವಾಗಿದೆ, ಧರ್ಮ ಅನಂತವಾಗಿದೆ. ಯಾವುದನ್ನೇ ಆದರೂ ಪ್ರಾಮಾಣಿಕತೆಯಿಂದ ಮಾಡಿದರೆ ಅದೆಲ್ಲ ನಿಮಗೆ ಹಿತಕಾರಿ. ಅತ್ಯಂತ ಕನಿಷ್ಠವಾದುದನ್ನೂ ಚೆನ್ನಾಗಿ ಮಾಡಿದರೆ ಅದರಿಂದ ಅದ್ಭುತ ಫಲಪ್ರಾಪ್ತಿ. ಪ್ರತಿಯೊಬ್ಬರೂ ತಮಗೆ ಸಾಧ್ಯವಾದ ಮಟ್ಟಿಗೆ ಮಾಡಲಿ. ಬೆಸ್ತ ತಾನು ಆತ್ಮನೆಂದು ತಿಳಿದರೆ ಒಳ್ಳೆಯ ಬೆಸ್ತನಾಗುವನು. ವಿದ್ಯಾರ್ಥಿ ತಾನು ಆತ್ಮನೆಂದು ತಿಳಿದರೆ ವಿದ್ಯಾರ್ಥಿಯಾಗುವನು. ವಕೀಲನು ತಾನು ಆತ್ಮನೆಂದು ತಿಳಿದರೆ ಒಳ್ಳೆಯ ವಕೀಲನಾಗುವನು.''

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೩, ಪು.೧೨೨)*

## ಸ್ವಾಮೀಜಿ ಕಂಡ ಹೊಸ ಜಗತ್ತು

ಸ್ವಾಮೀಜಿ ಭವಿಷ್ಯ ಭಾರತವನ್ನು ಕಟ್ಟಲು ಕಂಡ ಕನಸು ಎಷ್ಟೊಂದು ಅದ್ಭುತವಾಗಿತ್ತು ಎಂಬುದು ಮೇಲಿನ ನುಡಿಗಳಲ್ಲಿ ಸ್ಪಷ್ಟವಾಗಿದೆ. ವೇದ, ಉಪನಿಷತ್ತುಗಳಲ್ಲಿ ಕಂಡುಬರುವ ಆತ್ಮನ ಆದರ್ಶ ಅತ್ಯಂತ ಉನ್ನತ ಹಂತದ ಆದರ್ಶವಾಗಿದೆ. ಎಲ್ಲ ತತ್ತ್ವ ಸಿದ್ಧಾಂತಗಳ, ಧರ್ಮ–ಆಧ್ಯಾತ್ಮಿಕತೆಗಳ ಮುಕುಟಪ್ರಾಯವಾಗಿರುವ ತತ್ತ್ವವೇ ಆತ್ಮತತ್ತ್ವ. ಭಾರತದ ಆಧ್ಯಾತ್ಮಿಕ ಪರಂಪರೆ ಸಹಸ್ರಾರು ವರ್ಷಗಳ ಅನ್ವೇಷಣೆಯಿಂದ ಮನುಕುಲಕ್ಕೆ ಕೊಟ್ಟ ಕೊಡುಗೆಯೇ ವೇದಾಂತ. ಈ ವೇದಾಂತವು ಅತ್ಯಂತ ಸ್ಫುಟವಾದ ಧ್ವನಿಯಿಂದ ಸಾರುವ ತತ್ತ್ವವೇ ಆತ್ಮತತ್ತ್ವ. ಇದನ್ನು ಅರಿತುಕೊಳ್ಳಲು, ಅನುಷ್ಠಾನ ಮಾಡಲು ಎಲ್ಲರಿಗೂ ಅರ್ಹತೆಯಿಲ್ಲವೆಂದೂ, ಹಲವಾರು ಶಾಸ್ತ್ರಗಳನ್ನು ಓದಿದ ಮೇಲಷ್ಟೇ ಅದನ್ನು ತಿಳಿಯಬಹುದೆಂದೂ, ಸಾಂಪ್ರದಾಯಿಕರು ಹೇಳುತ್ತಾರೆ. ಈ ಅಭಿಪ್ರಾಯವನ್ನು ಸ್ವಾಮಿ ವಿವೇಕಾನಂದರು ಧ್ವಂಸಗೊಳಿಸುತ್ತಾರೆ. ವೇದಾಂತ ಸಂನ್ಯಾಸಿಗೆ ಮಾತ್ರವಲ್ಲ ; ಗೃಹಸ್ಥರಿಗೂ, ಜನಸಾಮಾನ್ಯರಿಗೂ, ಬಡವಬಲ್ಲಿದರಿಗೂ ಸಮಾನವಾಗಿ ಬೇಕಾಗಿದೆ; ಅದು ಜೀವನದ ವಿವಿಧ ವರ್ಗಗಳ ಜನರ ಪಾಲಿಗೆ ದೊರಕಬೇಕು; ಎಲ್ಲರೂ ದೈನಂದಿನ ಜೀವನದಲ್ಲಿ, ಹಲವು ಕೆಲಸಕಾರ್ಯಗಳ ನಡುವೆ ಅದನ್ನು ಆಚರಣೆ ತರಬೇಕು ಎಂದು ಸ್ವಾಮೀಜಿ ಪ್ರತಿಪಾದಿಸುತ್ತಾರೆ. ಅದಕ್ಕೆ ಸಮರ್ಪಕವಾದ ದಾರಿಯನ್ನೂ ತೋರಿಸಿಕೊಡುತ್ತಾರೆ. ಅತ್ಯುಚ್ಚ ಆದರ್ಶ, ದಿವ್ಯತೆಯಿಂದ ಕಂಗೊಳಿಸುವ ಗುರಿ, ಇವನ್ನು ಪ್ರತಿ ನಿಮಿಷದಲ್ಲೂ ಅನುಸರಿಸುವ ವಿಧಾನ – ಇವನ್ನೆಲ್ಲ ಮೇಲಿನ ನುಡಿಗಳಲ್ಲಿ ಸ್ವಾಮೀಜಿ ಸ್ಪಷ್ಟಪಡಿಸುತ್ತಾರೆ.

ಜೀವನದಲ್ಲಿ ಈ ಶ್ರೇಷ್ಠ ತತ್ತ್ವಗಳನ್ನು ಅನುಸರಿಸುವುದು ಹೇಗೆ? ಸ್ವಾಮೀಜಿ ಹೇಳಿರುವ ವಿಧಾನ ಹೀಗೆ — 'ವಿದ್ಯಾರ್ಥಿ ತಾನು ಆತ್ಮನೆಂದು ತಿಳಿದರೆ ಒಳ್ಳೆಯ ವಿದ್ಯಾರ್ಥಿಯಾಗುವನು..' ಇತ್ಯಾದಿ. ಈ ಮಾತು ಮೇಲ್ನೋಟಕ್ಕೆ ತುಂಬ ಸರಳ ಹಾಗೂ ಸುಲಭವಾದ ವಿಧಾನವೆಂಬಂತೆ ಕಾಣಿಸುತ್ತದೆ. ಆದರೆ ಈ ಮಾತನ್ನು ಪ್ರಾಯೋಗಿಕವಾಗಿ ಅನುಸರಿಸುವುದು ಹೇಗೆ?

ವಿದ್ಯಾರ್ಥಿಯ ಬದುಕನ್ನೇ ಗಮನಿಸೋಣ. ಉತ್ತಮ ವಿದ್ಯಾರ್ಥಿ ಎಂದರೆ ಯಾರು? ಯಾರು ಚೆನ್ನಾಗಿ ಓದುತ್ತಾನೋ, ಒಳ್ಳೆಯ ಅಂಕಗಳನ್ನು ಗಳಿಸುತ್ತಾನೋ, ಓದಿದ್ದನ್ನೆಲ್ಲ ತಪ್ಪದೆ ನೆನಪಿನಲ್ಲಿಟ್ಟುಕೊಳ್ಳುತ್ತಾನೋ ಅವನು. ಇದು ಸಾಮಾನ್ಯ ಭಾವನೆ.

ರ್‍ಯಾಂಕ್ ಗಳಿಕೆ, ಡಿಗ್ರಿ ಪಡೆಯುವುದು, ಉನ್ನತ ಉದ್ಯೋಗ ಗಳಿಸುವುದು — ಇವುಗಳಿಂದ ಅವನು ತನ್ನ ವಿದ್ಯಾರ್ಥಿ ಜೀವನ ವನ್ನು ಸಾರ್ಥಕಗೊಳಿಸಿಕೊಳ್ಳುತ್ತಾನೆ. ಇದು ಸಾಮಾನ್ಯವಾಗಿ ಹೆತ್ತ ವರು ಬಯಸುವ ಕ್ರಮ. ಇಲ್ಲಿ 'ತಾನು ಆತ್ಮನೆಂದು ತಿಳಿಯುವ' ಅಗತ್ಯವೇನಿದೆ? ಅದರಿಂದ ಅವನ ವಿದ್ಯಾಭ್ಯಾಸಕ್ಕೋ, ಜೀವ ನಕ್ಕೋ ಏನು ಲಾಭವಿದೆ? ಎಂದು ಪ್ರಶ್ನೆ ಮೂಡುವುದು ಸ್ವಾಭಾ ವಿಕ. ಜೀವನವೆಂದರೆ ಕೇವಲ ಉದ್ಯೋಗ, ಸಂಪಾದನೆ, ಸ್ಥಾನ ಮಾನ ಇವು ಮಾತ್ರ ಎಂದು ಭಾವಿಸುವ ಮನೋಭಾವದವರು, ಅದರಾಚೆಗೆ ವಿಶಾಲವಾಗಿ ಹರಡಿರುವ ಹಲವು ವಿಚಾರಗಳನ್ನು ಗಮನಿಸದೆ ಕೇವಲ ಪ್ರಾಪಂಚಿಕತೆಯಲ್ಲಿ ಮುಳುಗಿ ಹೋಗಿರು ವುದೇ ಇಂದಿನ ದುರಂತ. ಜೀವನವೆಂದರೆ ಕೇವಲ ಹಣ, ಸ್ವತ್ತು, ಭೋಗ, ಕೀರ್ತಿಗಳು ಮಾತ್ರ ಎಂದಾಗಿದ್ದರೆ, ಪ್ರಪಂಚದಲ್ಲಿ ಎಲ್ಲರೂ ಅಷ್ಟರಿಂದಲೇ ಸಂತೃಪ್ತರಾಗಿರಬೇಕಿತ್ತು. ಆದರೆ ಈ ಎಲ್ಲ ಆಶೋತ್ತರ, ಬಯಕೆ, ನಿರೀಕ್ಷೆಗಳೊಂದಿಗೆ ಸೋಲು, ಹತಾಶೆ, ದುಃಖ, ದುರಂತ, ಅನಿರೀಕ್ಷಿತ ಅಪಘಾತ, ರೋಗರುಜಿನ, ಬಗೆ ಹರಿಯದ ಸಮಸ್ಯೆಗಳೆಲ್ಲ ಗೋಚರಿಸುತ್ತವೆ. ಪ್ರಪಂಚದ ಇನ್ನೊಂದು ಮುಖವಾಗಿ ಕ್ರೌರ್ಯ, ದೌರ್ಜನ್ಯ, ವಂಚನೆ ವಿಶ್ವಾಸಘಾತುಕತನ, ಸ್ವೇಚ್ಛಾಚಾರ ಇವೆಲ್ಲ ಕಂಡುಬರುತ್ತವೆ. ಇವುಗಳ ನಡುವೆ ಸುರಕ್ಷಿತವಾಗಿ ಎಲ್ಲರೂ ತಮ್ಮತಮ್ಮ ಆಶೋತ್ತರ ಗಳನ್ನು ಈಡೇರಿಸಿಕೊಳ್ಳುವುದು ಸಾಧ್ಯವೆ? ಆರೋಗ್ಯಕರವಾದ, ನೆಮ್ಮದಿಯ ಸಮಾಜವನ್ನು ನಿರ್ಮಿಸಲು ಆಡಳಿತ, ಶಿಕ್ಷಣ, ಸಂಘ ಸಂಸ್ಥೆಗಳು ಎಷ್ಟು ಮುಖ್ಯವೋ, ಧರ್ಮ, ನೀತಿ, ಮೌಲ್ಯ, ತತ್ತ್ವ ಗಳೂ ಅಷ್ಟೇ ಮುಖ್ಯವಾಗಿವೆ. ಸಮಾಜವನ್ನು ಸರಿಯಾದ ಮಾರ್ಗ ದಲ್ಲಿ ಮುನ್ನಡೆಸುವ ಶಕ್ತಿ ಧರ್ಮಕ್ಕಿದೆ. ಆದ್ದರಿಂದ ಪ್ರತಿಯಬ್ಬನೂ ಅರಿತುಕೊಳ್ಳಬೇಕಾದ ಅತ್ಯಂತ ಮುಖ್ಯ ವಿಚಾರಗಳಲ್ಲಿ ಧರ್ಮ, ತತ್ತ್ವ, ನೀತಿಗಳು ಅವನ ಬದುಕನ್ನು, ಅವನ ಭವಿಷ್ಯವನ್ನು ರೂಪಿಸು ತ್ತವೆ. ಮಾನವನು ಧರ್ಮರಹಿತ ಜೀವನ ನಡೆಸಿದರೆ ಮೃಗವಾಗು ತ್ತಾನೆ; ಅವನ ಬದುಕನ್ನು ಧರ್ಮವು ರೂಪಿಸಿದರೆ, ಅವನು ದೈವಿ ಕತೆಯತ್ತ ಸಾಗುತ್ತಾನೆ. ಗಳಿಕೆ, ಸೊತ್ತು, ಸಂಪತ್ತುಗಳು ಕೇವಲ ವಸ್ತುಗಳು; ಅವುಗಳೇ ಅಂತಿಮ ಗುರಿಯಲ್ಲ. ಜೀವನದಲ್ಲಿ ಶಾಂತಿ, ಆನಂದ, ತೃಪ್ತಿ, ಪ್ರೀತಿ, ನೆಮ್ಮದಿಗಳೇ ಅಂತಿಮಗುರಿ. ಇವುಗಳನ್ನು ನೀಡುವವು ಅತ್ಯುನ್ನತ ಆದರ್ಶ, ತತ್ತ್ವಗಳು. ಆದ್ದ ರಿಂದ ತನ್ನ ಗಳಿಕೆ, ಸೊತ್ತನ್ನು ಸಾರ್ಥಕಗೊಳಿಸುವ ತಿಳುವಳಿಕೆ ಪ್ರತಿಯೊಬ್ಬನಿಗೂ ಬರಬೇಕು. ನೆಮ್ಮದಿಯ ಬದುಕಿನ ನಂತ ರವೂ ಪ್ರಶ್ನೆ ಉಳಿಯುತ್ತದೆ – ಬದುಕು ಎಂದರೆ ಇಷ್ಟು ಮಾತ್ರವೆ?

ಇಲ್ಲಿ ಸ್ವಾಮೀಜಿ ಹೇಳಿದ ಮಾತು ಮತ್ತೆ ಪ್ರಸ್ತುತವಾಗುತ್ತದೆ: 'ಆತ್ಮನೆಂದು ತಿಳಿದು' ಎಲ್ಲವನ್ನೂ ಮಾಡುವವನು ಎಲ್ಲಕ್ಕಿಂತಲೂ ಹೆಚ್ಚಿನದನ್ನು ಪಡೆಯುತ್ತಾನೆ. ಇಲ್ಲಿ ಕೇವಲ ಲಾಭದೃಷ್ಟಿಯಲ್ಲ; ಮಾನವನ ಜೀವನ, ಪ್ರಪಂಚದಲ್ಲಿನ ಬದುಕು, ಶಾಶ್ವತವಾದ ಸುಖ, ಎಲ್ಲರ ಹಿತ, ಎಲ್ಲ ಕೆಲಸಗಳಲ್ಲಿ ಸಾರ್ಥಕತೆ – ಹೀಗೆ ಒಟ್ಟು ನೋಟವಿದೆ. ಒಬ್ಬ ವಿದ್ಯಾರ್ಥಿ ತಾನು ಅಂಕಗಳಿಸಿ ಉನ್ನತ ಹಂತಕ್ಕೆ ಹೋಗುವುದಷ್ಟೇ ಅವನ ಗುರಿಯಲ್ಲ. ಅವನು ಸಮಗ್ರ ದೃಷ್ಟಿ ಯನ್ನು ಹೊಂದಿ, ತನ್ನ ನೈಜಸ್ವರೂಪವನ್ನು ಅರಿತು, ತನ್ನ ಕಲಿಕೆ ಯನ್ನು ಅಂಥ ಅರಿವಿನಿಂದ ಶಕ್ತಿಪೂರ್ಣವನ್ನಾಗಿಸಿಕೊಳ್ಳಬೇಕು. ತಾನು ಕಲಿಯುತ್ತಿರುವುದು ಏನನ್ನು? ತನಗೂ ಕಲಿಕೆಗೂ ಏನು ಸಂಬಂಧ? ತನ್ನ ಗುರಿ ಏನು? ಏನನ್ನು ಸಾಧಿಸಲು ಈ ಶಿಕ್ಷಣ ಅಗತ್ಯ? – ಇಂಥ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಕಂಡುಕೊಳ್ಳಬೇಕು. ಅದೇ ವಿದ್ಯಾರ್ಥಿ ಆತ್ಮತತ್ತ್ವವನ್ನು ಅರಿತಿದ್ದರೆ, ಅವನು ಜಗತ್ತನ್ನು ನೋಡುವ ದೃಷ್ಟಿಯೇ ಬದಲಾಗುವುದು. ಆತನ ಕಲಿಕೆ, ಗುರಿ, ಕಲಿಕೆಯ ವಿಧಾನ, ಅವನ ವ್ಯಕ್ತಿತ್ವ ಎಲ್ಲವೂ ಬದಲಾಗುವುದು. ವಿದ್ಯಾರ್ಥಿಯೊಬ್ಬನ ಎಳೆಯ ಮನಸ್ಸು ಇಷ್ಟೊಂದು ಗಹನ ತತ್ತ್ವ ವನ್ನು ಅರಿತುಕೊಳ್ಳಬಲ್ಲುದೆ? ಅರಿತರೂ ಅದನ್ನು ಅನುಷ್ಠಾನ ಮಾಡಬಲ್ಲ ಮನಃಶಕ್ತಿ ಅವನಲ್ಲಿರಬಹುದೆ? ಈ ಪ್ರಶ್ನೆಯೂ ಇಲ್ಲಿ ಮೂಡಬಹುದು.

ಮನುಷ್ಯ ಕೇವಲ ದೇಹವಲ್ಲ; ಅವನು ಮನಸ್ಸು, ಅಂತಃ ಕರಣಗಳನ್ನು ಒಳಗೊಂಡ ಆತ್ಮವಾಗಿದ್ದಾನೆ. ಎಲ್ಲ ಜೀವಿಗಳ ಅಂತ ರಂಗದಲ್ಲಿರುವ ಶಕ್ತಿಯೇ ಆತ್ಮ; ಅಂಥ ಆತ್ಮವನ್ನು ಅವಿನಾಶಿ ಯೆಂದೂ, ಶಾಶ್ವತನೆಂದೂ, ಯಾವುದೇ ಬದಲಾವಣೆಗಳಿಲ್ಲದ ಆನಂದಸ್ವರೂಪನೆಂದೂ ನಮ್ಮ ಪವಿತ್ರ ಗ್ರಂಥಗಳಾದ ವೇದ, ಉಪನಿಷತ್ತುಗಳು ಸಾರುತ್ತವೆ. ಈ ಆತ್ಮನನ್ನು ಕಂಡುಕೊಳ್ಳ ಬಹುದು. ಅವನನ್ನರಿತು ಮಾನವನು ತನ್ನ ಅಂತಿಮ ಗುರಿಯನ್ನು ತಲಪುತ್ತಾನೆ. ಹೀಗೆ ಆತ್ಮನನ್ನು ವಿವಿಧ ರೂಪಗಳಿಂದ ಅರಿತ ಮಹಾತ್ಮರು ಭಾರತದ ನೆಲದಲ್ಲಿ ಕಾಲಕಾಲಕ್ಕೆ ನೂರಾರು ಮಂದಿ ಆಗಿ ಹೋಗಿದ್ದಾರೆ — ಅವರ ಜೀವನ, ಸಂದೇಶಗಳೇ ಈ ಆತ್ಮತತ್ತ್ವಕ್ಕೆ ಅತಿದೊಡ್ಡ ಪ್ರಮಾಣ. ಇಷ್ಟು ಸರಳವಾದ ವಿಚಾರ ಗಳನ್ನು ಮಕ್ಕಳಿಂದ ಹಿಡಿದು ವೃದ್ಧರವರೆಗೆ ಎಲ್ಲರೂ ಅರಿತು ಕೊಳ್ಳಬಲ್ಲರು. ವಿದ್ಯಾರ್ಥಿಗಳ ಮನಸ್ಸಿಗೆ ನಾಟುವಂತೆ ಈ ವಿಚಾರ ಗಳನ್ನು ಬೋಧಿಸುವ ಸಾಮರ್ಥ್ಯ ಅಧ್ಯಾಪಕರಿಗೂ, ಹೆತ್ತವರಿಗೂ ಇರಬೇಕು. ಹೀಗಾದಾಗ ಮಾತ್ರ ವಿದ್ಯಾರ್ಥಿ 'ತಾನು ಆತ್ಮನೆಂದು ತಿಳಿದು' ಕಲಿಯುವುದು ಸಾಧ್ಯವಾಗುತ್ತದೆ. ಇಲ್ಲಿ ಒಂದು ವಿಚಾರ ಸ್ಪಷ್ಟವಾಗುತ್ತದೆ: ವಿದ್ಯಾರ್ಥಿಯಾಗಲಿ, ಸಾಮಾನ್ಯ ಬೆಸ್ತನಾಗಲಿ, ಅಕ್ಕಸಾಲಿಗನಾಗಲಿ, ವೈದ್ಯನಾಗಲಿ, ಆಫೀಸರ್ ಆಗಲಿ ತಾನು 'ಆತ್ಮನೆಂದು ಅರಿತು' ಕೆಲಸ ಮಾಡಲು ಅಗತ್ಯವಾದ ತರಬೇತಿ ಅವರ ಬಾಲ್ಯದಿಂದಲೇ ಆರಂಭವಾಗಬೇಕು. ಆಗ ಅವರ ಬದುಕಿ ನುದ್ದಕ್ಕೂ ಆ ಶಕ್ತಿ ಕೆಲಸ ಮಾಡುವುದು. ಹಾಗೆ ಅರಿತುಕೊಳ್ಳಲು ಅನುಕೂಲತೆಯನ್ನು ಕಲ್ಪಿಸಿಕೊಡುವ ಜವಾಬ್ದಾರಿ ಶಿಕ್ಷಣ ನೀತಿ ರೂಪಿಸುವ ಆಡಳಿದ್ದೂ, ಶಿಕ್ಷಕವರ್ಗದ್ದೂ ಆಗಿದೆ. ಇದರೊಂದಿಗೆ ಹೆತ್ತವರ, ಹಿರಿಯರ ಪಾತ್ರವನ್ನು ಕೂಡ ಅಲ್ಲಗಳೆಯುವಂತಿಲ್ಲ.

ದೇಶದ ಶಿಕ್ಷಣ ಪದ್ಧತಿಯಲ್ಲಿ ಗಣಿತ, ವಿಜ್ಞಾನ, ಇತಿಹಾಸ, ಭಾಷೆ ಮೊದಲಾದ ಹತ್ತು ಹಲವು ವಿಷಯಗಳನ್ನು ಅಳವಡಿ

ಸಿರುವಾಗ, ಅವುಗಳೇ ವಿದ್ಯಾರ್ಥಿಗೆ ಹೊರೆಯಾಗಿದೆ; ಹೀಗಿರುವಾಗ ಧರ್ಮ, ತತ್ತ್ವಗಳ ಬೋಧನೆ ಹೆಚ್ಚಿನ ಹೊರೆಯಲ್ಲವೆ? ಅದನ್ನು ತಾಳುವ ಸಾಮರ್ಥ್ಯ ಮಕ್ಕಳಿಗೆಲ್ಲಿದೆ? ಇಂಥ ಸಂದೇಹವನ್ನು ವ್ಯಕ್ತಪಡಿಸುವವರೂ ಇದ್ದಾರೆ. ಇಲ್ಲಿ ಒಂದು ವಿಚಾರ ಬಹಳ ಮುಖ್ಯ. ಮಕ್ಕಳ ಶಿಕ್ಷಣದಲ್ಲಿ ವಿಷಯಗಳ ಭಾರ ಕಡಿಮೆಯಾಗುವಂತೆ ಮಾಡಲು, ಅವರ ಮಾನಸಿಕ ಬೆಳವಣಿಗೆಯನ್ನರಿತ ಶಿಕ್ಷಕರು ಶ್ರಮಿಸಬೇಕು. ಶಿಕ್ಷಣ ಹೊರೆಯಾಗದಂತೆ, ಮಾಹಿತಿ–ವಿಷಯಗಳ ಭಾರ ಹೆಚ್ಚಾಗದಂತೆ ಶಿಕ್ಷಣಕ್ರಮವನ್ನೇ ಮಾರ್ಪಡಿಸಬೇಕು. ಧರ್ಮ, ತತ್ತ್ವವಿಚಾರಗಳೇನಿದ್ದರೂ 'ವಿಷಯದ ಭಾರ'ವಾಗದು; ಅವುಗಳು ಇಡೀ ಶಿಕ್ಷಣದ ಒಟ್ಟು ವಿಧಾನವನ್ನೇ ರೂಪಿಸುವ ಹಾಗೂ ನಿಯಂತ್ರಿಸುವ ಒಂದು ಮೂಲ ಪ್ರೇರಕ ಶಕ್ತಿಯಾಗಬೇಕು. ರೋಗರುಜಿನಗಳಿಂದ ನರಳುವ ವ್ಯಕ್ತಿಗೆ 'ನಾನು ದೇಹವಲ್ಲ, ಅಳಿವಿಲ್ಲದ ಆತ್ಮ' ಎಂಬ ಭಾವನೆ ಪ್ರಚಂಡ ಶಕ್ತಿ ನೀಡುತ್ತದೆ. ಅದು ಅವನ ರೋಗವನ್ನು ಶಮನಗೊಳಿಸುವಲ್ಲೂ, ರೋಗದ ಬಾಧೆಯನ್ನು ಸಹಿಸಿಕೊಳ್ಳುವಲ್ಲೂ ಮಹತ್ತರ ಪಾತ್ರ ವಹಿಸುತ್ತದೆ. ಅದೇ ರೀತಿ ವಿದ್ಯಾರ್ಥಿಗಳಲ್ಲಿ ಸಹಜವಾಗಿ ಮೂಡುವ ಆತಂಕ, ಭಯ, ಉದ್ವೇಗ, ಮನಸಿಕ ಚಾಂಚಲ್ಯ, ಉದಾಸೀನ ಭಾವ, ಮರೆವು ಇವನ್ನೆಲ್ಲ ದೂರಮಾಡಲು 'ಆತ್ಮಭಾವ' ಅತ್ಯುತ್ತಮ ಔಷಧವಾಗಿದೆ. ಇವೆಲ್ಲ ವಿದ್ಯಾರ್ಥಿಯ ಏಕಾಗ್ರತೆ, ಗ್ರಹಿಕೆಯ ಶಕ್ತಿ, ಸ್ಮರಣೆ ಹಾಗೂ ಮಾನಸಿಕ ಸ್ಥಿರತೆಯನ್ನು ಹೆಚ್ಚಿಸಲು ಸಹಾಯಕವಾಗುತ್ತವೆ.

ಸ್ವಾಮಿ ವಿವೇಕಾನಂದರು ವಿದ್ಯಾಭ್ಯಾಸವನ್ನು ಕುರಿತು ಅನೇಕ ವಿಚಾರಗಳನ್ನು ಹೇಳಿದ್ದಾರೆ. ವಿದ್ಯಾಭ್ಯಾಸವೆಂದರೆ ಏನು, ಏಕಾಗ್ರತೆಯನ್ನು ಗಳಿಸುವುದು ಹೇಗೆ, ವಿದ್ಯಾಭ್ಯಾಸದ ಗುರಿ ಯಾವುದು, ಶಿಕ್ಷಣ ಹಾಗೂ ಶಿಕ್ಷಕರ ಆದರ್ಶವೇನು, ಆದರ್ಶ ವಿದ್ಯಾರ್ಥಿ ಹೇಗಿರಬೇಕು ಇತ್ಯಾದಿ. ಈ ವಿಚಾರಗಳನ್ನೆಲ್ಲ ಶೈಕ್ಷಣಿಕ ವಿಧಾನದಲ್ಲಿ ಅಳವಡಿಸುವುದು ಸಾಧ್ಯವೆ? ಮೇಲೆ ವಿವರಿಸಿದ ಒಂದು ತತ್ತ್ವದಂತೆ, ಈ ಎಲ್ಲ ವಿಚಾರಗಳನ್ನು ಅಧ್ಯಾಪಕರು ವೈಯಕ್ತಿಕವಾಗಿ ವಿದ್ಯಾರ್ಥಿಗಳಿಗೆ ಹೇಳಿಕೊಡಬಹುದು. ಮಕ್ಕಳು ಪಠ್ಯಪುಸ್ತಕದಲ್ಲಿ ಹೇಳಿದ್ದನ್ನು ಮಾತ್ರವೇ ಕಲಿಯುತ್ತಾರೆ ಎಂಬುದು ಸುಳ್ಳು. ಪಠ್ಯದಲ್ಲಿಲ್ಲದ ಇತರ ಅನೇಕ ಸಂಗತಿಗಳನ್ನು ಅವರು ಕಲಿಯುತ್ತಾರೆ; ಹಲವು ಬಾರಿ ಅಂಥ ವಿಷಯಗಳೇ ಅವರ ಜೀವನದಲ್ಲಿ ಪ್ರಧಾನ ಅಂಶವಾಗಿ ಮಾರ್ಪಡುತ್ತವೆ. ಆದ್ದರಿಂದ ಸ್ವಾಮೀಜಿಯವರ ವಿಚಾರಗಳು ಎಲ್ಲಿಂದ ಬೇಕಾದರೂ ಬರಲಿ, ಆದರೆ ವಿದ್ಯಾರ್ಥಿಗಳನ್ನು ತಲುಪಲಿ ಎಂಬುದೇ ಮುಖ್ಯ.

ವಿದ್ಯಾರ್ಥಿಗಳ ವಿಷಯವಾಗಿ ಸ್ವಾಮೀಜಿ ಹೇಳಿದಂತೆಯೇ, ಜೀವನದ ಇನ್ನಿತರ ವಲಯಗಳಲ್ಲಿರುವ ಜನರು 'ಆತ್ಮಭಾವ'ವನ್ನು ಹೊಂದಿ ಕೆಲಸಮಾಡಿದರೂ ಇದೇ ರೀತಿ ಅತ್ಯದ್ಭುತ ಪರಿವರ್ತನೆಯಾಗುವುದು. ಆತ್ಮಭಾವದಿಂದ ಮೀನು ಹಿಡಿಯುವ ಬೆಸ್ತ 'ಒಳ್ಳೆಯ ಬೆಸ್ತ'ನಾಗುವುದೆಂದರೇನು? ಅದು ಅವನ ವ್ಯಕ್ತಿತ್ವವೇ ಬದಲಾಗುವುದನ್ನು ಸೂಚಿಸುತ್ತದೆ. ದುಡಿಯುವ ವ್ಯಕ್ತಿ ಅತ್ಯುತ್ತಮನಾದರೆ, ಅವನ ದುಡಿಮೆ ಶ್ರೇಷ್ಠವಾಗುವುದು, ಅವನ ದುಡಿಮೆಯ ಫಲ ತಾನಾಗಿಯೇ ಅತ್ಯುತ್ತಮವಾಗುವುದು. ಇಲ್ಲಿ ಸಮಸ್ಯೆಯೇನೆಂದರೆ, ಅನಕ್ಷರತೆ, ಬಡತನ, ಅಸಮಾನತೆ, ಅನಾರೋಗ್ಯಗಳಿಂದ ನರಳುತ್ತಿರುವ ಭಾರತ ದೇಶದಲ್ಲಿ ಬೆಸ್ತರಂತಹ, ಕೂಲಿ ಕೆಲಸದವರಂತಹ ಬಡಜನರಲ್ಲಿ ಆತ್ಮಭಾವವನ್ನು ತರುವುದು ಸಾಧ್ಯವೆ? ಸ್ವಾಮೀಜಿ ಕನಸು ತುಂಬ ದೂರದ ಮಾತು ಅನ್ನಿಸದೆ? ಅಥವಾ ಅಸಾಧ್ಯವಾದ ಆದರ್ಶ ಅನ್ನಿಸದೆ?

ಆದರೆ ಸ್ವಾಮೀಜಿ ವಾಸ್ತವತೆಯ ಅರಿವಿಲ್ಲದ ವ್ಯಕ್ತಿಯಾಗಿರಲಿಲ್ಲ. ಪ್ರತಿಯೊಬ್ಬ ಭಾರತೀಯನ ಬಡ ಹೃದಯಕ್ಕೆ ಸ್ಪಂದಿಸಿದ ಹೃದಯ ಅವರದು. ಭಾರತದ ಸರ್ವತೋಮುಖ ಬೆಳವಣಿಗೆಗಾಗಿ ಎಲ್ಲ ರಂಗಗಳಲ್ಲೂ ಶ್ರಮವಹಿಸಿ ದುಡಿಯಬೇಕೆಂದೂ, ಕ್ರಾಂತಿಕಾರಕ ಬದಲಾವಣೆಗಾಗಿ ಅತಿಹೆಚ್ಚಿನ ತ್ಯಾಗ ಅಗತ್ಯವೆಂದೂ ಅವರು ಕರೆಕೊಟ್ಟರು. ಭಾರತದಲ್ಲಿ ಜನರು ಆಧ್ಯಾತ್ಮಿಕ ವಿಚಾರಗಳನ್ನು ಸಹಜವಾಗಿ ಸ್ವೀಕರಿಸುವರು, ಅದು ಅವರ ಉಸಿರೇ ಆಗಿದೆ ಎಂಬುದನ್ನು ಸ್ವಾಮೀಜಿ ಅರಿತಿದ್ದರು. ಬಡತನ, ಅನಕ್ಷರತೆ ಮೊದಲಾದ ಸಮಸ್ಯೆಗಳನ್ನು ನಿವಾರಿಸುವುದರ ಜೊತೆಯಲ್ಲೇ ಅವರಿಗೆ ಅತಿ ಶ್ರೇಷ್ಠವಾದ ತತ್ತ್ವಗಳನ್ನು ಅನುಷ್ಠಾನ ಮಾಡುವ ತರಬೇತಿಯೂ ಅಗತ್ಯವೆಂದು ಸ್ವಾಮೀಜಿ ಬೋಧಿಸುತ್ತಾರೆ. ದೈನಂದಿನ ಕೆಲಸಕಾರ್ಯಗಳ, ಚಟುವಟಿಕೆಗಳ ನಡುವೆ ಆತ್ಮವಿಚಾರ ಮಾಡುವುದು, ಆತ್ಮಭಾವದಿಂದ ಕೆಲಸ ಮಾಡುವುದು ಸಾಧ್ಯವೆಂಬುದನ್ನು ತಮ್ಮ ಜೀವನದ ಮೂಲಕವೇ ಸ್ವಾಮೀಜಿ ತೋರಿಸಿಕೊಟ್ಟರು. ಹಲವರು ಅಭ್ಯಾಸದ ಹಂತದಲ್ಲಿ ಮುಗ್ಗರಿಸಬಹುದು, ಹತಾಶೆ–ನಿರಾಶೆಗಳಿಂದ ಬಳಲಬಹುದು; ಆದರೆ ಅದರಿಂದ ಆದರ್ಶ ವಿಚಲಿತವಾಗದು. ಮರಳಿ ಯತ್ನ ಮಾಡುತ್ತ ಜನರು ಆದರ್ಶದೆಡೆಗೆ ಮುಂದುವರಿಯುತ್ತಾರೆ. ಈ ಬಗೆಯ ಜೀವನಕ್ರಮ ಭಾರತದಲ್ಲಿ ಹಲವು ಶತಮಾನಗಳಿಂದ ಬೆಳೆದುಬಂದಿದೆ. ನಮ್ಮ ಸಾಂಸ್ಕೃತಿಕ ಪರಂಪರೆ ಈ ಬಗೆಯ ಆಧ್ಯಾತ್ಮಿಕ ತರಬೇತಿಯನ್ನು ನೀಡುತ್ತ ಬಂದಿದೆ. ಅದನ್ನು ನಾವು ಅರಿತುಕೊಂಡು ಅನುಷ್ಠಾನದಲ್ಲಿ ತರಬೇಕು. ಈ ಪರಂಪರೆಯ ರಕ್ಷಣೆ ನಮ್ಮೆಲ್ಲರ ಹೊಣೆಗಾರಿಕೆಯಾಗಿದೆ.

**ಮಾರ್ಚ್ ತಿಂಗಳ ಕಾರ್ಯಕ್ರಮಗಳು**

| | | |
|---|---|---|
| ೧ | ಗುರುವಾರ | ಶ್ರೀ ಚೈತನ್ಯ ಜಯಂತಿ |
| ೫ | ಸೋಮವಾರ | ಸ್ವಾಮಿ ಯೋಗಾನಂದ ಜಯಂತಿ |
| ೧೩ | ಮಂಗಳವಾರ | ಏಕಾದಶಿ |
| ೨೫ | ಭಾನುವಾರ | ಶ್ರೀರಾಮನವಮಿ |
| ೨೭ | ಮಂಗಳವಾರ | ಏಕಾದಶಿ |

# ಸಾಧನೆಯ ಮಾರ್ಗಗಳು



❁ ಮನುಷ್ಯನಿಗೆ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳು ಉಂಟಾಗುತ್ತವೆ. ಯಾರು ಜ್ಞಾನಮಾರ್ಗಿಗಳೋ ಅವರು ಈ ಅವಸ್ಥೆಗಳನ್ನು ತಿದ್ದಿ ತೇಲಿಸಿಬಿಡುತ್ತಾರೆ. 'ಬ್ರಹ್ಮ ಈ ಮೂರು ಅವಸ್ಥೆಗಳಿಗೆ ಅತೀತ; ಸ್ಥೂಲ ಸೂಕ್ಷ್ಮ ಕಾರಣ – ಈ ಮೂರು ದೇಹಗಳಿಗೆ ಅತೀತ; ಸತ್ತ್ವ ರಜಸ್ಸು ತಮಸ್ಸು – ಈ ಮೂರು ಗುಣಗಳಿಗೂ ಅತೀತ; ಕನ್ನಡಿಯಲ್ಲಿ ಬೀಳುವ ಪ್ರತಿಬಿಂಬದ ಹಾಗೆ ಇವೆಲ್ಲ ಬರೀ ಮಾಯೆ; ಪ್ರತಿಬಿಂಬ ಎಂದಿಗೂ ವಸ್ತುವಲ್ಲ; ಬ್ರಹ್ಮನೊಬ್ಬನೇ ವಸ್ತು. ಉಳಿದುದೆಲ್ಲ ಅವಸ್ತು' ಅಂತ ಅವರು ಹೇಳುತ್ತಾರೆ.

❁ ಬ್ರಹ್ಮಜ್ಞಾನಿಗಳು ಮತ್ತೆ ಹೇಳುತ್ತಾರೆ, 'ದೇಹಾತ್ಮ ಬುದ್ಧಿ ಇದ್ದಿತು ಎಂದರೆ ದ್ವೈತವನ್ನು ನೋಡಬೇಕಾಗುತ್ತದೆ; ಪ್ರತಿಬಿಂಬವೇ ಸತ್ಯ ಎಂಬ ಬೋಧೆಯಾಗುತ್ತದೆ. ಈ ಬುದ್ಧಿ ಹೋಯಿತು ಎಂದರೆ 'ಸೋಽಹಮ್', 'ನಾನೇ ಬ್ರಹ್ಮ' ಎಂಬ ಅನುಭೂತಿ ಉಂಟಾಗುತ್ತದೆ.'

❁ ಅನೇಕ ಮಾರ್ಗಗಳಲ್ಲಿ ವಿಚಾರಮಾರ್ಗವೂ ಒಂದು. ಇದು ವೇದಾಂತವಾದಿಗಳ ಮಾರ್ಗ. ಬೇರೊಂದು ಮಾರ್ಗವಿದೆ, ಭಕ್ತಿಮಾರ್ಗ. ಭಕ್ತನು ಬ್ರಹ್ಮಜ್ಞಾನ ಬೇಕೆಂದು ವ್ಯಾಕುಲಚಿತ್ತದಿಂದ ಅತ್ತರೆ, ಅದೂ ಆತನಿಗೆ ದೊರೆತುಬಿಡುತ್ತದೆ. ಜ್ಞಾನಯೋಗ ಮತ್ತು ಭಕ್ತಿಯೋಗ ಎರಡೂ ಭಗವಂತನ ಸಾಕ್ಷಾತ್ಕಾರಕ್ಕೆ ಮಾರ್ಗಗಳೇ.

❁ ಇವೆರಡೂ ಮಾರ್ಗಗಳಿಂದಲೂ ಬ್ರಹ್ಮಜ್ಞಾನವನ್ನು ಪಡೆಯಬಹುದು. ಕೆಲಕೆಲವರು ಬ್ರಹ್ಮಜ್ಞಾನವನ್ನು ಪಡೆದುಕೊಂಡ ನಂತರವೂ ಲೋಕಶಿಕ್ಷಣಾರ್ಥವಾಗಿ ಭಕ್ತರಾಗಿಯೇ ಉಳಿಯುವರು; ಉದಾಹರಣೆಗೆ ಅವತಾರಾದಿಗಳು. 'ಅಹಂ' ಎಂಬುದು ಸಹಜವಾಗಿ ನಮ್ಮನ್ನು ಬಿಟ್ಟು ಹೋಗುವುದಿಲ್ಲ. ಆ ಕಾರಣದಿಂದ ಭಕ್ತ ಜಾಗ್ರತ್ ಸ್ವಪ್ನ ಸುಷುಪ್ತಿ ಅವಸ್ಥೆಗಳನ್ನು ತಿದ್ದಿ ತೇಲಿಸಿಬಿಡುವುದಿಲ್ಲ. ಭಕ್ತ ಎಲ್ಲಾ ಅವಸ್ಥೆಗಳನ್ನೂ ಸ್ವೀಕರಿಸುತ್ತಾನೆ; ಸತ್ತ್ವ ರಜಸ್ಸು ತಮಸ್ಸು ಈ ಮೂರು ಗುಣಗಳನ್ನೂ ಅನುಮೋದಿಸುತ್ತಾನೆ. ಭಕ್ತನ ದೃಷ್ಟಿಯಿಂದ ಭಗವಂತನೇ ಚತುರ್ವಿಂಶತಿ ತತ್ತ್ವಗಳಾಗಿದ್ದಾನೆ, ಜೀವ ಜಗತ್ತಾಗಿದ್ದಾನೆ; ಆತನೇ ಸಾಕಾರ ಚಿನ್ಮಯ ರೂಪಿನಿಂದ ಕಾಣಿಸಿಕೊಳ್ಳುತ್ತಿದ್ದಾನೆ.

❁ ಯೋಗಗಳಲ್ಲಿ ಎರಡು ವಿಧ; ಮನೋಯೋಗ, ಕರ್ಮಯೋಗ. ಗುರುವಿನ ಉಪದೇಶಕ್ಕನುಗುಣವಾಗಿ ಪೂಜೆ, ತೀರ್ಥಯಾತ್ರೆ, ಜೀವಸೇವೆ ಇವನ್ನೆಲ್ಲ ಮಾಡುವುದಕ್ಕೆ ಕರ್ಮಯೋಗ ಅಂತ ಹೆಸರು. ಜನಕಾದಿಗಳು ಯಾವ ಕರ್ಮವನ್ನು ಮಾಡುತ್ತಿದ್ದರೊ ಅದಕ್ಕೂ ಕರ್ಮಯೋಗ ಅಂತ ಹೆಸರು. ಯೋಗಿಗಳು ಮಾಡುವ ಸ್ಮರಣ ಮನನಕ್ಕೆ ಮನೋಯೋಗ ಅಂತ ಹೆಸರು.

❁ ಭಕ್ತನು ವಿದ್ಯಾಮಾಯೆಯನ್ನು ಆಶ್ರಯಿಸಿಕೊಂಡು ಇರುತ್ತಾನೆ. ಸಾಧುಸಂಗ, ತೀರ್ಥಯಾತ್ರೆ, ಜ್ಞಾನ, ವೈರಾಗ್ಯ ಇವುಗಳೆಲ್ಲದರ ಆಶ್ರಯಮಾಡಿಕೊಂಡು ಇರುತ್ತಾನೆ. ಆತ ಹೇಳುತ್ತಾನೆ, '' 'ಅಹಂ' ಎಂಬುದು ಸಹಜವಾಗಿ ಹೋಗದೆ ಇರುವುದರಿಂದ, ಆ ನೀಚ 'ಅಹಂ' ಭಗವಂತನ ದಾಸನಾಗಿಯೋ, ಭಗವಂತನ ಭಕ್ತನಾಗಿಯೋ ಇರಲಿ'' ಅಂತ.

❁ ಭಕ್ತನಿಗೂ ಏಕಾಕಾರ ಜ್ಞಾನ ದೊರಕುತ್ತದೆ; ಆತನಿಗೆ ಭಗವಂತನೊಬ್ಬನಲ್ಲದೆ ಬೇರೆ ಏನೂ ಕಾಣದು. ಆತ ಎಲ್ಲವೂ 'ಸ್ವಪ್ನವತ್' ಅಂತ ಹೇಳುವುದಿಲ್ಲ, ಆದರೆ ಹೇಳುತ್ತಾನೆ, 'ಭಗವಂತನೇ ಸಮಸ್ತವೂ ಆಗಿದ್ದಾನೆ' ಅಂತ. ಮೇಣದ ತೋಟದಲ್ಲಿ ನಾನಾ ಆಕಾರಗಳನ್ನು ನೋಡಬಹುದು. ಆದರೆ ಪ್ರತಿಯೊಂದೂ ಮೇಣದಿಂದ ನಿರ್ಮಿತವಾದುದೆ.

❁ ಆದರೆ ಭಕ್ತಿ ಪಕ್ವವಾದಾಗ ಮಾತ್ರ ಈ ಅನುಭವ ದೊರೆಯುತ್ತದೆ. ದೇಹದಲ್ಲಿ ಪಿತ್ತ ಜಾಸ್ತಿಯಾದಾಗ ಕಾಮಾಲೆ ರೋಗ ಬರುತ್ತದೆ; ಆಗ ಎಲ್ಲವೂ ಹಳದಿಯಾಗಿ ತೋರುತ್ತದೆ. ಶ್ರೀಮತಿಯು (ರಾಧೆ) ಶ್ಯಾಮನ ಚಿಂತನೆ ಮಾಡಿ ಮಾಡಿ ಎಲ್ಲವೂ ಶ್ಯಾಮಮಯವಾಗಿರುವಂತೆ ಕಂಡಳು; ತಾನೂ ಶ್ಯಾಮನಾಗಿರುವಂತೆ ಆಕೆಗೆ ಅನುಭವವಾಯಿತು. ಪಾದರಸದ ಕೊಳದಲ್ಲಿ ಸೀಸ ಅನೇಕ ದಿವಸಗಳವರೆಗೆ ಬಿದ್ದಿದ್ದರೆ ಅದೂ ಪಾದರಸವಾಗಿಬಿಡುತ್ತದೆ. ಕೀಟ ಭ್ರಮರಕ್ಕೆ ಹೆದರಿ, ಅದರ ಚಿಂತನೆ ಮಾಡುತ್ತ ಮಾಡುತ್ತ ಸ್ತಬ್ಧವಾಗಿಬಿಡುತ್ತದೆ; ಅದರ ಚಲನೆಯೇ ನಿಂತು ಹೋಗಿ ಬಿಡುತ್ತದೆ. ಕೊನೆಗೆ ಅದು ಭ್ರಮರವೇ ಆಗಿಬಿಡುತ್ತದೆ. ಭಕ್ತನೂ ಭಗವಂತನ ಧ್ಯಾನ ಮಾಡಿ ಮಾಡಿ 'ಅಹಂ' ಶೂನ್ಯವಾಗಿ ಬಿಡುತ್ತಾನೆ; ಆಗ ಅನುಭವ ಪಡೆಯುತ್ತಾನೆ, 'ಆತನೇ ನಾನು' 'ನಾನೇ ಆತನು' ಎಂಬುದಾಗಿ. ಕೀಟ ಭ್ರಮರವಾಗಿ ಹೋಯಿತು ಎಂದರೆ, ಎಲ್ಲವೂ ಸಿದ್ಧಿಸಿದ ಹಾಗೆಯೇ; ಒಡನೆಯೇ ಮುಕ್ತಿ.

❁ ಎಲ್ಲಿಯವರೆಗೆ ಆತ 'ಅಹಂ' ಎಂಬುದನ್ನು ಇಟ್ಟಿರುವನೋ, ಅಲ್ಲಿಯವರೆಗೆ ಯಾವುದಾದರೂ ಒಂದು ಭಾವವನ್ನು —ಶಾಂತ, ದಾಸ್ಯ, ವಾತ್ಸಲ್ಯ ಇವೇ ಮೊದಲಾದುವನ್ನು ಆರೋಪಿಸಿಕೊಂಡು ಆತನನ್ನು ಕರೆಯಬೇಕು.

ಶ್ರೀರಾಮಕೃಷ್ಣ ವಚನವೇದದಿಂದ

# ನಾ ಕಂಡಂತೆ ಸ್ವಾಮಿ ವಿವೇಕಾನಂದರು

**ಸ್ವಾಮಿ ಅತುಲಾನಂದ**



ಮೂಲತಃ ಹಾಲೆಂಡ್‌ನವರಾದ ಸ್ವಾಮಿ ಅತುಲಾನಂದರು ಅಮೆರಿಕದಲ್ಲಿ ಸ್ವಾಮಿ ವಿವೇಕಾನಂದರನ್ನು ಭೇಟಿಯಾಗಿ, ಅವರ ಗಾಢ ಪ್ರಭಾವಕ್ಕೊಳಗಾದರು. ಶ್ರೀಮಾತೆಯವರಿಂದ ಮಂತ್ರ ದೀಕ್ಷೆ ಪಡೆದ ಅವರು ಶ್ರೀರಾಮಕೃಷ್ಣರ ನೇರ ಶಿಷ್ಯಂದಿರ ನಿಕಟ ಸಂಪರ್ಕಕ್ಕೆ ಬಂದರು. ಅವರು ರಾಮಕೃಷ್ಣ ಮಹಾಸಂಘದಲ್ಲಿ ಸಂನ್ಯಾಸ ಸ್ವೀಕಾರ ಮಾಡಿದ ಮೊದಲ ಪಾಶ್ಚಾತ್ಯರಾಗಿದ್ದಾರೆ. ತಮ್ಮ ಜೀವನದ ಕೊನೆಯವರೆಗೂ ಭಾರತದಲ್ಲೇ ಇದ್ದು ಹಲವೆಡೆ ತಪಸ್ವೀ ಜೀವನವನ್ನು ನಡೆಸಿದ ಮಹಾನ್ ಸಾಧಕರು ಅವರು. ರಾಮಕೃಷ್ಣ ಮಹಾಸಂಘದ ಆಂಗ್ಲ ಮಾಸಪತ್ರಿಕೆ **'ವೇದಾಂತ ಕೇಸರಿ'**ಯ ೧೯೬೭-೬೮ರ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಅವರ ಲೇಖನದ ಅನುವಾದವಿದು. ಲೇಖನದ ಅನುವಾದ ಮಾಡಿದವರು : **ಮಾತಾ ತ್ಯಾಗಮಯೀ.**

ಸ್ವಾಮಿ ವಿವೇಕಾನಂದರೊಡನೆ ನನ್ನ ಮೊದಲ ಭೇಟಿ ೧೮೯೯ರಲ್ಲಿ, ಅವರ ಅಮೆರಿಕದ ದ್ವಿತೀಯ ಭೇಟಿಯ ಸಂದರ್ಭದಲ್ಲಿ ನಡೆಯಿತು. ಅವರು ಭಾರತದಿಂದ ಇಂಗ್ಲೆಂಡಿನ ಮಾರ್ಗವಾಗಿ ಆಗಮಿಸಿದ್ದರು. ನ್ಯೂಯಾರ್ಕಿನ ವೇದಾಂತ ಸೊಸೈಟಿ ಅವರಿಗೆ ಸ್ವಾಗತ ಕಾರ್ಯಕ್ರಮವನ್ನು ಆಯೋಜಿಸಿತ್ತು. ಅದರಲ್ಲಿ ಕೆಲವೇ ಮಂದಿ ಶ್ರೋತೃಗಳಿದ್ದರು - ಅವರ ಹಳೆಯ ಮಿತ್ರರು ಮತ್ತು ವೇದಾಂತ ಸೊಸೈಟಿಯ ಸದಸ್ಯರು. ನಾನು ಕೋಣೆಯನ್ನು ಪ್ರವೇಶಿಸಿದಾಗ ಸ್ವಾಮೀಜಿ, ಭಾರತೀಯ ಪದ್ಧತಿಯಂತೆ ನೆಲದ ಮೇಲೆ ಕುಳಿತಿದ್ದುದನ್ನು ನೋಡಿದೆ. ಅವರು ತಮ್ಮ ಮಿತ್ರರೊಂದಿಗೆ ಹಾಸ್ಯ-ಪರಿಹಾಸ್ಯದಲ್ಲಿ ತೊಡಗಿದ್ದರು. ನನ್ನನ್ನು ಅವರಿಗೆ ಪರಿಚಯಿಸಿದಾಗ ನಾನು ಅವರ ಭದ್ರ ರೂಪವನ್ನು ನೋಡುತ್ತಿದ್ದೆನು, ಅದರಲ್ಲೂ ಅವರ ಆಕರ್ಷಕವಾದ ಹೊಳೆಹೊಳೆಯುವ ಕಣ್ಣುಗಳು. ಅಂದು ಸಾಯಂಕಾಲ ಅವರು ಶ್ರೋತೃಗಳೊಂದಿಗೆ ಅಡ್ಡಾಡುತ್ತಿದ್ದಾಗ ಅವರ ಘನಗಂಭೀರ ನಡಿಗೆ ಮತ್ತು ಚಲನವಲನಗಳು ನನ್ನ ಮನದಲ್ಲಿ ಗಾಢವಾಗಿ ಅಚ್ಚೊತ್ತಿದ್ದವು. ನಾನು ಒಂದು ಮಹಾನ್ ಚಾರಿತ್ರ್ಯದ ಸನ್ನಿಧಾನದಲ್ಲಿದ್ದೇನೆ, ನಾನು ಒಬ್ಬ ಪ್ರಚಂಡ ಇಚ್ಛಾಶಕ್ತಿಯ ಸಂತನೊಡನಿದ್ದೇನೆ, ಈ ಮನುಷ್ಯನಿಗೆ ತಾನು ಯಾರು ಎಂದು ಗೊತ್ತಿದೆ — ಎಂದು ನನಗೆ ಅನ್ನಿಸಿತು.

ಕೆಲವರು ಸ್ವಲ್ಪ ಹೊತ್ತು ಭಾಷಣ ಮಾಡಿದರು. ಬಳಿಕ ಸ್ವಾಮೀಜಿ ಮಾತನಾಡಿದರು. ಅವರು ತಾವು ಸ್ವಾತಂತ್ರ್ಯದ ನಾಡಿಗೆ ಬಂದಿರುವುದಕ್ಕಾಗಿ ಸಂತೋಷ ವ್ಯಕ್ತಪಡಿಸಿದರು. ತಾವು ಕಲಿಯಲು ಮತ್ತು ಕಲಿಸಲು ಬಂದಿರುವುದಾಗಿ ಹೇಳಿದರು. ತಾವು ನಮ್ಮ ಆಧ್ಯಾತ್ಮಿಕ ಜೀವನದಲ್ಲಿ ನೆರವು ನೀಡಲು ಸದಾ ಸಿದ್ಧ, ಧರ್ಮ ಎಂದರೆ ಸಾಕ್ಷಾತ್ಕಾರ, ನಾವು ಸಾಕ್ಷಾತ್ಕಾರವನ್ನು ಪಡೆದೇ ತೀರಬೇಕು. ಭಗವಂತನಲ್ಲಿ ಯಾವ ದ್ವೈತವಿಲ್ಲ, ದ್ವೈತವನ್ನು ನೋಡುವವನು ಮೃತ್ಯುವಿನಿಂದ ಮೃತ್ಯುವಿಗೆ ಹೋಗುತ್ತಾನೆ. ಹೃದಯಗ್ರಂಥಿಗಳು ಭೇದಿಸಲ್ಪಟ್ಟಾಗ ಮರ್ತ್ಯನು ಅಮರ್ತ್ಯನಾಗುತ್ತಾನೆ. ಅವನು ಬ್ರಹ್ಮಪದವನ್ನು ಪಡೆಯುತ್ತಾನೆ. ಧರ್ಮವು ಸಿದ್ಧಾಂತಗಳಲ್ಲಿಲ್ಲ, ನಂಬಿಕೆಗಳಲಿಲ್ಲ ಅಥವಾ ಶಾಸ್ತ್ರಾಧ್ಯಯನದಲ್ಲಿಲ್ಲ. ವ್ಯಕ್ತಿ ಶಾಸ್ತ್ರಗಳ ಸಾರವನ್ನು ಗ್ರಹಿಸಬೇಕು - ಎಂದು ಅವರು ಹೇಳಿದರು. ಕೊನೆಗೆ 'ಶಿವ ಶಿವ' ಎಂದು ಪಠಿಸುತ್ತ ತಮ್ಮ ಮಾತುಗಳನ್ನು ಮುಗಿಸಿದರು, ಸಭೆ ಮುಕ್ತಾಯವಾಯಿತು.

ಕೆಲವು ದಿನಗಳ ಕಾಲ ವಿಶ್ರಾಂತಿಯ ತರುವಾಯ ಸ್ವಾಮೀಜಿ ವೇದಾಂತದ ತರಗತಿಗಳನ್ನು ಆರಂಭಿಸಿದರು. ಅವರ ಮೊದಲ ಭಾಷಣದಿಂದಲೇ ನಾನು ಗಾಢವಾಗಿ ಪ್ರಭಾವಿತನಾಗಿ ಅವರ ತರಗತಿಗಳಿಗೆ ನಿಯಮಿತವಾಗಿ ಹೋಗುತ್ತಿದ್ದೆನು. ನಾವು ಕೇವಲ ೨೦-೩೦ ಮಂದಿ ಶ್ರೋತೃಗಳಿದ್ದೆವು. ನಮ್ಮ ಪ್ರತಿಯೊಂದು ತರಗತಿಯೂ ಅನೌಪಚಾರಿಕವಾಗಿರುತ್ತಿತ್ತು. ಸ್ವಾಮೀಜಿ ವೇದಮಂತ್ರ ಪಠಣದೊಂದಿಗೆ ಮಾತು ಆರಂಭಿಸುತ್ತಿದ್ದರು. ವೇದಾಂತದ ಕುರಿತು ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು. ಬಳಿಕ ಪ್ರಶ್ನೋತ್ತರಗಳಿರುತ್ತಿದ್ದವು.

ಅಂತಹ ಒಂದು ತರಗತಿಯಲ್ಲಿ ಸ್ವಾಮೀಜಿ ಮಾನವನ ದೈವತ್ವ ವನ್ನು ಕುರಿತು ಮಾತನಾಡಿದರು: ''ಈ ದೇಹ ಮನಸ್ಸುಗಳ ಹಿಂದೆ ನಿತ್ಯಯುಕ್ತನಾದ ನಮ್ಮ ನಿಜ ಸ್ವರೂಪ ಆತ್ಮನಿದ್ದಾನೆ. ದೇವರು ನಮ್ಮೊಳಗಿದ್ದಾನೆ ಎಂದಲ್ಲ, ನಾವೇ ದೇವರಾಗಿದ್ದೇವೆ.'' ಅವರು ನಮಗೆ ಶ್ವೇತಕೇತುವಿನ ಕಥೆಯನ್ನು ಹೇಳಿದರು. ಒಬ್ಬರು ಪ್ರಶ್ನಿಸಿದರು: ''ಸ್ವಾಮೀಜಿ, ನಾವು ಪಾಪಿಗಳು, ನಾವು ಹುಲುಮಾನವರು. ನಾವು ದೇವರು ಎಂದು ನೀವು ಹೇಗೆ ಹೇಳುತ್ತೀರಿ?'' ಸ್ವಾಮೀಜಿ ಉತ್ತರಿಸಿದರು: ''ಪಾಪ ಎಂಬುದು ಅಜ್ಞಾನ. ಸತ್ಯದ ಪ್ರಖರ ಬೆಳಕಿನಲ್ಲಿ ಪಾಪ, ಅಜ್ಞಾನಗಳು ಪಲಾಯನಗೈಯುವವು.''

ಇನ್ನೊಬ್ಬರು ಪ್ರಶ್ನಿಸಿದರು: ''ನಾವು ದೇವರನ್ನು ಏಕೆ ನೋಡುತ್ತಿಲ್ಲ?'' ಅವರು ಉತ್ತರಿಸಿದರು: ''ಏಕೆಂದರೆ ನೀವು ವ್ಯರ್ಥ ಮಾತುಕತೆಗಳಲ್ಲಿ ತೊಡಗಿದ್ದೀರಿ. ನಿಮ್ಮ ಮನಸ್ಸು ಜಗತ್ತಿನಲ್ಲಿ ಅನುರಕ್ತವಾಗಿರುವಂತೆ ಆತ್ಮನಲ್ಲಿ ಸ್ಥಿರವಾಗಿ ಅನುರಕ್ತವಾಗುವುದಾದರೆ ನೀವು ಬಂಧಮುಕ್ತರಾಗುತ್ತೀರಿ, ನೀವು ಬ್ರಹ್ಮವನ್ನು ಪಡೆಯುತ್ತೀರಿ. ನೀವು ನಿಮ್ಮ ದುರ್ಬಲತೆಗಳನ್ನು ಕುರಿತು ಗೊಣಗದಿರಿ. ಆತ್ಮನಲ್ಲಿ ಸ್ಥಿರರಾಗಿರಿ. ಸತ್ಯವನ್ನು ನುಡಿಯಿರಿ. ಸತ್ಯವನ್ನು ಚಿಂತನೆ ಮಾಡಿರಿ. ಸತ್ಯದಲ್ಲಿ ಬದುಕಿರಿ. ಆಗ ನೀವು ಪವಿತ್ರರಾಗುತ್ತೀರಿ, ಬಲಿಷ್ಠರಾಗುತ್ತೀರಿ. ನಿಮ್ಮ ಶಾಸ್ತ್ರಗಳು ಹೇಳುತ್ತಿವೆ, ನೀವು ದೇವರೆಂಬುದನ್ನು ನೀವು ಅರಿಯಲಾರಿರಾ? ನಾವು ಈಗ ಕನಸಿನ ಲೋಕದಲ್ಲಿ ಪ್ರಮಾದವಶರಾಗಿ, ಎಚ್ಚರಗೇಡಿಗಳಾಗಿ, ಭ್ರಮಾಧೀನರಾಗಿ ಸಂಚರಿಸುತ್ತಿದ್ದೇವೆ. ಇದು ಜಗತ್ತು, ಇದು ಮಾಯೆ. ಏಳಿ, ಬಂಧನವನ್ನು ಕುಟ್ಟಿ ಪುಡಿಪುಡಿಮಾಡಿರಿ. ಮುಕ್ತರಾಗಿರಿ. ಸ್ವಾತಂತ್ರ್ಯ, ಮುಕ್ತಿ ನಿಮ್ಮ ಗುರಿ.''

ಸ್ವಾಮೀಜಿಯ ತರಗತಿಗಳಲ್ಲಿದ್ದ ಕೆಲವರು ಕೆಲವು ಚಿಂತನೆಗಳನ್ನು ತಪ್ಪಾಗಿ ಗ್ರಹಿಸುತ್ತಿದ್ದರು. ಸ್ವಾಮೀಜಿ ಅಪಾರ ತಾಳ್ಮೆಯಿಂದ ಅವನ್ನು ಸರಿಪಡಿಸಲೆತ್ನಿಸುತ್ತಿದ್ದರು. ಒಂದು ದಿನ ಒಬ್ಬರು ಕೇಳಿದರು, ''ಆದರೆ, ಸ್ವಾಮೀಜಿ, ನಮ್ಮ ಮಿಷನರಿಗಳು ಹೀಗೆ ಹೇಳುವುದಿಲ್ಲವಲ್ಲ?'' ಆಗ ಸ್ವಾಮೀಜಿ ಗುಡುಗಿದರು, ''ನಿಮ್ಮ ಮಿಷನರಿಗಳು ಯಾರು? ತಾವು ಅಜ್ಞಾನದಲ್ಲಿ ಮುಳುಗಿ ನಮ್ಮನ್ನು ಮೇಲೆತ್ತ ಹೊರಟಿದ್ದಾರೆ. ಅವರಿಗೆ ತಮ್ಮ ಧರ್ಮದ ಅರಿವು ಇಲ್ಲ, ನಮ್ಮನ್ನು ಟೀಕಿಸುತ್ತಿದ್ದಾರೆ. ಆದರೆ ಅವರಲ್ಲಿ ಕೆಲವರು ಅದಕ್ಕೆ ಅಪವಾದವಾಗಿದ್ದಾರೆ. ನಾನು ಬೈಬಲ್ಲನ್ನು ನಿಮ್ಮಿಂದ ದೂರ ಮಾಡಲು ಬಂದಿಲ್ಲ. ನಿಮ್ಮ ತಿಳುವಳಿಕೆಯನ್ನು ವಿಸ್ತರಿಸಲು, ಎತ್ತರಿಸಲು ಬಂದಿದ್ದೇನೆ. ನಾನು ನಿಮ್ಮನ್ನು ಕ್ರಿಸ್ತನಿಂದ ದೂರ ಮಾಡಲು ಅಲ್ಲ, ಕ್ರಿಸ್ತನ ಬಳಿ ಕರೆದೊಯ್ಯಲು ಬಂದಿದ್ದೇನೆ. ನಾನು ಕ್ರಿಸ್ತನನ್ನು ಗೌರವಿಸುತ್ತೇನೆ, ಪೂಜಿಸುತ್ತೇನೆ. ವೇದಾಂತ ಯಾರ ಶ್ರದ್ಧೆಗೂ ಕುಠಾರದೇಟನ್ನು ಹಾಕುವುದಿಲ್ಲ, ಅದು ಪ್ರತಿಯೊಬ್ಬರಿಗೂ ಅವನ ಇಷ್ಟ ಮಾರ್ಗದಲ್ಲಿ ಮುನ್ನಡೆಯುವ ಸ್ವಾತಂತ್ರ್ಯವನ್ನು ನೀಡುತ್ತದೆ.''

ಸ್ವಾಮೀಜಿ ಮಾನವ ಸ್ವಭಾವವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಅವರು ಮಾನವ ಮನಸ್ಸಿನ ಒಳಹೊಕ್ಕು ನೋಡಬಲ್ಲವರಾಗಿದ್ದರು. ಅವರು ದೃಷ್ಟಿ ಮಾತ್ರದಿಂದ ಒಬ್ಬ ವ್ಯಕ್ತಿಯ ಅಂತರಾಳವನ್ನು ಅಳೆಯ ಬಲ್ಲವರಾಗಿದ್ದರು. ಅವರ ದುರ್ಬಲತೆಯನ್ನು ಹೊಡೆದೋಡಿಸಬಲ್ಲವರಾಗಿದ್ದರು. ಅವರಲ್ಲಿನ ಅತ್ಯುತ್ತಮ ಸಾಮರ್ಥ್ಯವನ್ನು ಎಚ್ಚರಗೊಳಿಸಬಲ್ಲವರಾಗಿದ್ದರು. ಅವರ ದೃಢ ಭಾವನೆ – ''ಶುದ್ಧ ಚಾರಿತ್ರ್ಯವೇ ಧರ್ಮದ ಬುನಾದಿ. ಮೊದಲು ಮನುಷ್ಯರಾಗಿರಿ, ಬಳಿಕ ದೇವರಾಗಿರಿ'' ಎಂಬುದು.


ಸ್ವಾಮಿ ಅತುಲಾನಂದರು

ಸ್ವಾಮೀಜಿ ಕೆಲವೊಮ್ಮೆ ಖ್ಯಾತನಾಮರ ಅತಿಥಿಗಳಾಗಿದ್ದರು. ಅವರು ಅಮೆರಿಕದ ಅತ್ಯುತ್ತಮ ಬುದ್ಧಿಜೀವಿಗಳ ಸಂಪರ್ಕಕ್ಕೆ ಬಂದಿದ್ದರು. ವಿಜ್ಞಾನಿಗಳು, ತತ್ತ್ವಜ್ಞಾನಿಗಳು, ಮನೋರೋಗ ತಜ್ಞರು, ಸಾಹಿತಿಗಳು ಅವರ ಸಂಪರ್ಕಕ್ಕೆ ಬಂದು ಅವರಿಂದ ಲಾಭ ಪಡೆದರು.

ಅವರಿಗೆ ಪ್ರತಿಯೊಂದು ವಿಷಯವನ್ನು ಕುರಿತೂ ವಿಸ್ತಾರವಾದ ಪರಿಜ್ಞಾನವಿದ್ದಿತು. ಅವರು ಪ್ರತಿಯೊಬ್ಬ ವ್ಯಕ್ತಿಯನ್ನೂ ಅವನ ಸ್ತರದಿಂದ ನೋಡಬಲ್ಲವರಾಗಿದ್ದರು. ಸಮಾಜದ ಪ್ರಖ್ಯಾತರು, ಗಣ್ಯ ಮಾನ್ಯರು ಅವರ ಪ್ರಚಂಡ ಬುದ್ಧಿಮತ್ತೆಯಿಂದ ಆಕರ್ಷಿತರಾಗಿದ್ದರು. ಒಬ್ಬ ವಿಜ್ಞಾನಿ ಅವರಿಗೆ ಹೇಳಿದನು: ''ನಿಮ್ಮ ಭಾಷಣಗಳು ನಮ್ಮ ಇತ್ತೀಚಿನ ಸಂಶೋಧನೆಗಳೊಂದಿಗೆ ತಾಳೆಯಾಗುತ್ತವೆ. ಅದಕ್ಕಾಗಿ ನಾನು ನಿಮ್ಮ ಭಾಷಣಗಳನ್ನು ಕೇಳಲು ಬರುತ್ತೇನೆ.'' ಒಬ್ಬ ಮನೋವಿಜ್ಞಾನಿ ಹೇಳಿದನು ''ಸ್ವಾಮೀಜಿ, ನಾವು ಈಗತಾನೆ ಮನಸ್ಸನ್ನು ವಿಶ್ಲೇಷಿಸಲು ಆರಂಭಿಸಿದ್ದೇವೆ. ನಿಮ್ಮ ರಾಜಯೋಗವು ನಮಗೆ ಹೊಸ ದಿಗಂತವನ್ನು ಪರಿಚಯಿಸುತ್ತದೆ.''

ಒಂದು ಮಹಾನ್ ಶಕ್ತಿ ಅವರ ಜೀವನದುದ್ದಕ್ಕೂ ಅವರ ಹಿನ್ನೆಲೆಯಲ್ಲಿತ್ತು. ಅದು ಗುರುದೇವ ಶ್ರೀರಾಮಕೃಷ್ಣರ ದೈವೀ ಶಕ್ತಿ. ಅದೇ ಅವರನ್ನು ಸಪ್ತರ್ಷಿ ಮಂಡಲದಿಂದ ಇಳೆಗೆ ಕರೆತಂದಿತು. ಅದೇ ಶಕ್ತಿ ಅವರ ಚಾರಿತ್ರ್ಯವನ್ನು ಸರ್ವತೋಭದ್ರವಾಗಿ ರೂಪಿಸಿ, ಅವರಿಗೆ ಸಾಕ್ಷಾತ್ಕಾರ ಪದವನ್ನು ನೀಡಿತು. ಅವರಿಗೆ ಗೊತ್ತಿತ್ತು, ತಾವು ಗುರುದೇವನ ಯಂತ್ರ ಮಾತ್ರ. ಗುರುದೇವನ ಇಚ್ಛೆ, ಗುರುದೇವನ ಶಕ್ತಿ ತನ್ನ ಮೂಲಕ ಕೆಲಸ ಮಾಡುತ್ತಿದೆ. ಅವರು ಭಗವಂತನಿಂದ ಆದೇಶ ಪಡೆದ ವಾಗ್ಮಿಯಾಗಿದ್ದರು. ಲೋಕಸಂಗ್ರಹಕ್ಕಾಗಿ ಭಗವಂತನಿಂದ ಆದೇಶವನ್ನು ಪಡೆದ ಆಧಿಕಾರಿಕ ಪುರುಷರಾಗಿದ್ದರು. ತಾಯಿ ಭಾರತಿ ತನ್ನೀ ಸಂತಾನಕ್ಕಾಗಿ ಸದಾ ಸರ್ವದಾ ಹೆಮ್ಮೆ ಪಡುವಂತಾಯಿತು.

# ಬ್ರಹ್ಮಜ್ಞಾನಿ ಯಾಜ್ಞವಲ್ಕ್ಯರು

**ಮಂಡಗದ್ದೆ ಪ್ರಕಾಶ ಬಾಬು ಕೆ.ಆರ್**

ಸನಾತನ ಧರ್ಮವನ್ನು ಬೆಳಗಿದ ಪ್ರಾಚೀನ ಋಷಿಗಳ ಸಾಲಿನಲ್ಲಿ ಎದ್ದು ನಿಲ್ಲುವವರು ಯಾಜ್ಞವಲ್ಕ್ಯರು. ಅತಿಶ್ರೇಷ್ಠವಾದ ತತ್ತ್ವವನ್ನು ಪ್ರತಿಪಾದಿಸಿದವರೂ, ಅಷ್ಟೇ ಉಜ್ಜ್ವಲವಾದ ಬದುಕನ್ನು ಜಗತ್ತಿಗೆ ತೋರಿಸಿಕೊಟ್ಟವರೂ ಆದ ಈ ಮಹಾತ್ಮರ ಪರಿಚಯವನ್ನು ಇಲ್ಲಿ ಮಾಡಲಾಗಿದೆ. ಲೇಖಕರು ಬೆಂಗಳೂರು ರಾಮಕೃಷ್ಣ ಮಠದ ಭಕ್ತರು; ಅಧ್ಯಾತ್ಮ ಸಾಧನೆ, ಅಧ್ಯಯನ, ಸೇವೆ ಮುಂತಾದ ಕಾರ್ಯಗಳಲ್ಲಿ ನಿರತರಾಗಿರುವ ಅವರು ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಹಲವು ಪತ್ರಿಕೆಗಳಲ್ಲಿ ಅವರ ಅನೇಕ ಲೇಖನಗಳು ಕೂಡ ಪ್ರಕಟವಾಗಿವೆ.

ಉಜ್ವಲ ಸೂರ್ಯನಂತೆ ಪ್ರಕಾಶಿಸುತ್ತಿದ್ದ ಏಕೈಕ ಋಷಿವರ್ಯರೆಂದರೆ ಮಹರ್ಷಿ ಯಾಜ್ಞವಲ್ಕ್ಯರು. ಇವರು ದೇವರಾತ ಮತ್ತು ಸುನಂದಾದೇವಿಯವರ ನಿರಂತರ ತಪಸ್ಸಿನ ಫಲದಿಂದ ಜನಿಸಿದವರು. ಯಾಜ್ಞವಲ್ಕ್ಯರ ಸೋದರಮಾವನೇ ಆಗಿದ್ದ ಶ್ರೀವೈಶಂಪಾಯನರ ಬಳಿ ಅವರು ಕೃಷ್ಣಯಜುರ್ವೇದವನ್ನು ಅಧ್ಯಯನ ಮಾಡಿದ್ದರು. ಯಾವುದೋ ಒಂದು ಕಾರಣಕ್ಕೆ ಗುರು ಶಿಷ್ಯರಲ್ಲಿ ಮನಸ್ತಾಪವುಂಟಾಗಿದ್ದರಿಂದ ಯಾಜ್ಞವಲ್ಕ್ಯರು ಆಶ್ರಮವನ್ನು ತ್ಯಜಿಸಿ ಸೂರ್ಯದೇವನನ್ನು ಆರಾಧಿಸಿ ಹೊಸ ಯಜುರ್ವೇದವನ್ನು ಪಡೆದರು. ಅದಕ್ಕೆ ಶುಕ್ಲ ಯಜುರ್ವೇದ ಅಥವಾ ವಾಜಸನೇಯ ಸಂಹಿತಾ ಎಂಬ ಹೆಸರನ್ನು ಕೊಟ್ಟರು. ಸಂಹಿತೆಯಲ್ಲಿ ಅಡಗಿರುವ ಈಶಾವಾಸ್ಯೋಪನಿಷತ್ತು ಅಥವಾ ಬ್ರಾಹ್ಮಣದ ಕೊನೆಯಲ್ಲಿರುವ ಬೃಹದಾರಣ್ಯಕೋಪನಿಷತ್ತು, ಇವು ಜಗನ್ಮಾನ್ಯವಾದ ವೇದಾಂತದ ಮೂಲಗ್ರಂಥಗಳಾಗಿರುತ್ತವೆ.

**ಯಾಜ್ಞವಲ್ಕ್ಯರ ಹುಟ್ಟು** : ಸುನಂದಾದೇವಿ ಗರ್ಭವತಿಯಾಗಿದ್ದಾಗ, ಅವಳ ಪತಿ ದೇವರಾತನು ಮಹಾವಿಷ್ಣುವಿನೊಂದಿಗೆ ಸಂವಾದ ನಡೆಸಿದ ವೇಳೆಗೆ ದೇವತೆಗಳೂ ಪಿತೃಗಳೂ, ಋಷಿಗಳೂ ಅಲ್ಲಿದ್ದರು. ಎಲ್ಲಕ್ಕಿಂತ ಮಿಗಿಲಾಗಿ, ''ಮಹಾವಿಷ್ಣುವಿನ ಆಜ್ಞೆಯಂತೆ ಆಗಮಿಸಿ ವಿನೂತನವಾದ ವೇದಸಂಹಿತೆ ಮತ್ತು ಉಪನಿಷತ್ತನ್ನು ಲೋಕಕ್ಕೆ ನೀಡಲು ಬಂದಿದ್ದೇನೆ'' ಎಂದು ಒಳಗಿದ್ದ ಮಹಾಚೇತನವೇ ನುಡಿಯುತ್ತದೆ, ಹಾಗೂ ಪ್ರಸವದವರೆಗೂ ತಾಯಿ ಜಪಿಸಬೇಕಾದ ವೇದಮಂತ್ರವನ್ನು ಸಹ ತಂದೆಗೆ ತಿಳಿಸುತ್ತದೆ.

ಸುನಂದಾದೇವಿಗೆ ನವಮಾಸಗಳು ತುಂಬಿದ ನಂತರ ಕಾರ್ತೀಕ ಮಾಸದ ಶುಕ್ಲಪಕ್ಷದ ಸಪ್ತಮಿ ದಿನದಂದು ಮಗುವಿನ ಜನನವಾಗುವುದು. ಮಗುವಿನ ನಾಮಕರಣ ನಿಮಿತ್ತ ನಡೆಸಿದ ನವಗ್ರಹ ಹೋಮದಲ್ಲಿ ನವಗ್ರಹ ದೇವತೆಗಳೇ ಸ್ವತಃ ಬಂದು ಹವಿಸ್ಸನ್ನು ಸ್ವೀಕರಿಸುತ್ತಾರೆ. ಯಜ್ಞಕಾರ್ಯವೇ ಪ್ರಧಾನವಾದ ಅಂಶವಾಗಿದ್ದರಿಂದ ಅದರ ಹಿರಿಮೆಯನ್ನು ಸದಾಕಾಲ ನೆನೆಯುತ್ತಿರಲೆಂದು ದೇವರಾತನು ಮಗನಿಗೆ 'ಯಾಜ್ಞವಲ್ಕ್ಯ' ಎಂದು ನಾಮಕರಣ ಮಾಡುತ್ತಾರೆ. ಮುಂದೆ ಬುಡಿಲ ಎಂಬ ಮಹರ್ಷಿಗಳ ನೇತೃತ್ವದಲ್ಲಿ ಚೂಡಾಕರ್ಮ ಅಕ್ಷರಾಭ್ಯಾಸ ನಡೆಯುತ್ತದೆ.



ಆ ಸಂದರ್ಭದಲ್ಲಿ ಆ ಬಾಲಕನ ಸುತ್ತ ಬೆಳಕಿನ ಶಕ್ತಿವ್ಯೂಹ ನಿರ್ಮಾಣವಾಗಿ ಸಾಕ್ಷಾತ್ ಸರಸ್ವತಿದೇವಿಯೇ ಇಡೀ ಶರೀರವನ್ನು ವ್ಯಾಪಿಸುತ್ತಾಳೆ. ಉಪನಯನದ ಸಮಯದಲ್ಲಿ ತಂದೆಯು ಗಾಯತ್ರೀ ಮಂತ್ರವನ್ನು ಉಪದೇಶ ಮಾಡುವಾಗ ಮುಖದಲ್ಲಿ ಅಗ್ನಿಯನ್ನು, ಕಣ್ಣುಗಳಲ್ಲಿ ಆದಿತ್ಯನನ್ನು, ನಾಸಿಕದಲ್ಲಿ ವಾಯುದೇವನನ್ನು ಉದ್ದೀಪನಗೊಳಿಸುತ್ತ, ಆಯಾಯ ಸ್ಥಾನಗಳಲ್ಲಿ ಆಯಾಯ ಸ್ವರೂಪಗಳಲ್ಲಿ ಅವರುಗಳು ಆವಾಹಿತರಾಗುವುದನ್ನು ಋಷಿ ಬುಡಿಲರು ಪ್ರತ್ಯಕ್ಷವಾಗಿ ಕಾಣುತ್ತಾರೆ. ನಂತರ ಯಾಜ್ಞವಲ್ಕ್ಯರು ಗುರುಕುಲಕ್ಕೆ ಸೇರುತ್ತಾರೆ. ಮಹರ್ಷಿ ಭಾಸ್ಕರರಿಂದ ಋಗ್ವೇದವನ್ನೂ, ಜೈಮಿನಿ ಋಷಿಗಳಿಂದ ಸಾಮವೇದವನ್ನೂ, ಅರುಣೀ ಋಷಿಗಳಿಂದ ಅಥರ್ವಣವೇದವನ್ನೂ ಅಧ್ಯಯನ ಮಾಡುತ್ತಾರೆ. ಯಜುರ್ವೇದದ ಅಧ್ಯಯನದ ಮಾರ್ಗದರ್ಶಕರು ಆಚಾರ್ಯ ವೈಶಂಪಾಯನರು. ಇವರು ಶಿಷ್ಯನ ತೀಕ್ಷ್ಣ ಗ್ರಹಣ

ಶಕ್ತಿ, ಉನ್ನತ ಮಟ್ಟದ ಚಿಂತನೆ, ಹಾಗೂ ಅಧ್ಯಯನಶೀಲತೆಯನ್ನು ನೋಡಿ ಬೆರಗಾಗುತ್ತಾರೆ. ಅನಿರೀಕ್ಷಿತ ಅಹಿತ ಘಟನೆ, ಅನಿವಾರ್ಯವಾಗಿ ಗುರು-ಶಿಷ್ಯರನ್ನು ಪ್ರತ್ಯೇಕ ಮಾಡಿತು. ಗುರುವಿನಿಂದ ಕಲಿತ ವಿದ್ಯೆಯನ್ನು ಶಿಷ್ಯರು ಮತ್ತೆ ಗುರುವಿಗೆ ಹಿಂದಿರುಗಿಸುತ್ತಾರೆ. ನಂತರ ಅವರೇ ತಪಸ್ಸು ಮಾಡಿ ಶುಕ್ಲ ಯಜುರ್ವೇದದ ಬೃಹದಾರಣ್ಯಕ ಉಪನಿಷತ್ತನ್ನು ರಚಿಸುತ್ತಾರೆ.

ಒಮ್ಮೆ ಮಿಥಿಲೆಯ ಮಹಾರಾಜ ಜನಕ ಒಂದು ದಕ್ಷಿಣ ಯಾಗವನ್ನು ಆಚರಿಸುವಾಗ ಅಗ್ರಪೂಜೆಯನ್ನು ಒಬ್ಬ ಬ್ರಹ್ಮಜ್ಞಾನಿಗೆ ಸಲ್ಲಿಸಬೇಕೆಂದು ಘೋಷಣೆಯಾಗುತ್ತದೆ ಮತ್ತು ಅಂಥವರು ಸುವರ್ಣ ವರಹಗಳಿಂದ ಅಲಂಕೃತವಾದ ಸಹಸ್ರ ಗೋವುಗಳನ್ನು ದಾನವಾಗಿ ಪಡೆಯಬಹುದೆಂದು ಆಜ್ಞೆ ನೀಡುತ್ತಾರೆ. ಅಲ್ಲಿ ನೆರೆದಿದ್ದ ಮಹಾನ್ ಪಂಡಿತರುಗಳು, ವಿದ್ವಾಂಸರುಗಳು, ಋಷಿಮುನಿಗಳು, ಇದನ್ನು ಕೇಳಿ ತಟಸ್ಥರಾಗುತ್ತಾರೆ. ಆದರೆ ಮಹರ್ಷಿ ಯಾಜ್ಞವಲ್ಕ್ಯರು ಎದ್ದುನಿಂತು ಅವರ ಶಿಷ್ಯರಾದ ನಾಮಶ್ರವನಿಗೆ ಗೋವುಗಳನ್ನು ಆಶ್ರಮಕ್ಕೆ ಕರೆದುಕೊಂಡು ಹೋಗಲು ಆಜ್ಞೆ ಮಾಡುತ್ತಾರೆ. ಮೌನವಾಗಿದ್ದ ಎಲ್ಲ ಋಷಿಗಳೂ ಮೇಲೆ ಎದ್ದು, ''ನೀವು ಬ್ರಹ್ಮಜ್ಞಾನಿಯಾಗಿದ್ದರೆ ನಾವು ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರ ನೀಡಬೇಕು'' ಎಂದು ನುಡಿದರು. ಅವರು ಕೇಳಿದ ಪ್ರಶ್ನೆಗಳಿಗೆ ತಕ್ಕ ಉತ್ತರವನ್ನು ಯಾಜ್ಞವಲ್ಕ್ಯರು ನೀಡಿದರು. ಕಾತ್ಯಾಯಿನಿ ಮತ್ತು ಮೈತ್ರೇಯಿ ಯಾಜ್ಞವಲ್ಕ್ಯರ ಪತ್ನಿಯರು. ಯಾಜ್ಞವಲ್ಕ್ಯರು ಗುರುಕುಲದ ಎಲ್ಲಾ ಕಾರ್ಯಗಳಿಂದ ನಿವೃತ್ತಿ ಹೊಂದಬಯಸಿ, ಸಂನ್ಯಾಸ ಸ್ವೀಕರಿಸಲು ನಿರ್ಧರಿಸಿದಾಗ ತಮ್ಮ ಸಂಪತ್ತನ್ನು ತಮ್ಮ ಪತ್ನಿಯರಿಗೆ ಹಂಚಲು ಮುಂದಾದರು. ಕಾತ್ಯಾಯಿನಿ ಅದಕ್ಕೆ ಒಪ್ಪಿದರೂ ಮೈತ್ರೇಯಿ ಒಪ್ಪಲಿಲ್ಲ. ಏಕೆಂದರೆ, ''ಧನ ಸಂಪೂರ್ಣವಾದ ಈ ಪೃಥ್ವಿ ನನಗಿದ್ದರೆ ನಾನು ಅಮೃತಳಾಗುವೆನೆ?'' ಎಂದು ಅವಳು ಪ್ರಶ್ನಿಸಿದಳು. ಅದಕ್ಕೆ ಯಾಜ್ಞವಲ್ಕ್ಯರು ''ಇಲ್ಲ'' ಎನ್ನುತ್ತಾರೆ. **ಅಮೃತತ್ವಸ್ಯ ತು ನಾಶಾಸ್ತಿ ವಿತ್ತೇನ** – ಸಂಪತ್ತಿನಿಂದ ಅಮೃತಳಾಗುವ ಭರವಸೆ ಇಲ್ಲ. ಮೈತ್ರೇಯಿ ದೃಢವಾಗಿ ಹೇಳುತ್ತಾಳೆ, ''ಹಾಗಾದರೆ ಸಂಪತ್ತನ್ನು ತೆಗೆದು ಕೊಂಡು ಏನು ಮಾಡಲಿ?'' ಅದಕ್ಕೆ ಯಾಜ್ಞವಲ್ಕ್ಯರು, ''ನನಗೆ ಪ್ರಿಯಳಾದ ನೀನು ಈಗ ಮತ್ತಷ್ಟು ಪ್ರಿಯಳಾದೆ. ವಾಸ್ತವಿಕವಾಗಿ ನಿನ್ನ ಪ್ರಯೋಜನಕ್ಕಾಗಿ ನೀನು ನನಗೆ ಪ್ರಿಯಳಾಗುವುದಿಲ್ಲ. **ನನಗಾಗಿ** ಹೆಂಡತಿ, ಮಕ್ಕಳು, ಬಂಧುಗಳು ಎಲ್ಲರೂ ಪ್ರಿಯರಾಗುವರು. ಆ **ನಾನು** ಎನ್ನುವ ಮೂಲವೇ ಆತ್ಮ; ಆತ್ಮವನ್ನು ಕಾಣಬೇಕೆಂದರೆ ಕೇಳಬೇಕು, ಮನನ ಮಾಡಬೇಕು, ಅನುಸಂಧಾನ ಮಾಡಬೇಕು. ಆತ್ಮವನ್ನು ಕೇಳಿ, ತಿಳಿದು ಅನುಭವಿಸಿದರೆ ಈ ಎಲ್ಲವೂ ತಿಳಿಯುವುದು'' ಎಂದು ಯಾಜ್ಞವಲ್ಕ್ಯರು ಆತ್ಮಜ್ಞಾನ ವನ್ನು ಸರಳವಾಗಿ ಮೈತ್ರೇಯಿಗೆ ಬೋಧಿಸಿದರು. 'ಹೀಗಲ್ಲ, ಹೀಗಲ್ಲ' ಎಂದೇ (ನೇತಿಮಾರ್ಗ) ಆತ್ಮವನ್ನು ತಿಳಿಯಬೇಕು. ಇದೇ ಅಮೃತತ್ವಕ್ಕೆ ದಾರಿಯಾಗುವುದು. ಮಹರ್ಷಿ ಯಾಜ್ಞವಲ್ಕ್ಯರ ವಾಣಿ ವೇದವಾಯಿತು, ಅವರ ಬದುಕು ಯಜ್ಞವಾಯಿತು.

# ಸಾಧಕನಿಗೆ ಗೆಲ್ಲಲು ಏಕಾಗ್ರತೆಯ ಮೂಲಮಂತ್ರ

## (ವಿದ್ಯಾರ್ಥಿ ಮತ್ತು ಸಾಧಕರಿಗೆ ಏಕಾಗ್ರತೆಯ ಜಾಗೃತಿ)

**ವಿವೇಕ ಪ್ರದೀಪ**

ಆಧುನಿಕ ಪ್ರಪಂಚದಲ್ಲಿ ವಿದ್ಯಾರ್ಥಿಗಳ ಮನಸ್ಸನ್ನು ಅಧ್ಯಯನ, ಏಕಾಗ್ರತೆಯತ್ತ ಹೊರಳಿಸುವುದು ಬಹುದೊಡ್ಡ ಸವಾಲಾಗಿ ಪರಿಣಮಿಸಿದೆ. ಸ್ವಾಮಿ ವಿವೇಕಾನಂದರ ಜೀವನ, ಉಪದೇಶಗಳಲ್ಲಿ ಕಂಡುಬರುವ ಏಕಾಗ್ರತೆಯ ವಿಚಾರಗಳನ್ನು ನೀಡುವ ಮೂಲಕ ಈ ಸವಾಲನ್ನು ಸಮರ್ಥವಾಗಿ ಎದುರಿಸುವುದು ಸಾಧ್ಯವೆಂಬುದನ್ನು ಇಲ್ಲಿ ಲೇಖಕರು ವಿವರಿಸಿದ್ದಾರೆ. ಬೀದರ್‌ನಲ್ಲಿ ಶಿಕ್ಷಕರಾಗಿರುವ ಲೇಖಕರು ಸ್ವಾಮೀಜಿ ವಿಚಾರ ಧಾರೆಗಳಿಂದ ವಿಶೇಷವಾಗಿ ಪ್ರೇರಿತರಾಗಿದ್ದಾರೆ.



**ನಾಸ್ತಿ ಬುದ್ಧಿರಯುಕ್ತಸ್ಯ ನಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥**

*(ಹತೋಟಿ ಇಲ್ಲದವನಿಗೆ ಬುದ್ಧಿ ಇರುವುದಿಲ್ಲ ; ಹತೋಟಿ ಇಲ್ಲದವನಿಗೆ ಧ್ಯಾನವೂ ಸಾಧ್ಯವಾಗುವುದಿಲ್ಲ; ಧ್ಯಾನ ಮಾಡದವನಿಗೆ ಶಾಂತಿಯಿಲ್ಲ; ಶಾಂತಿಯಿಲ್ಲದವನಿಗೆ ಸುಖವೆಲ್ಲಿಯ ಮಾತು?)*

ಶ್ರೀಮದ್ಭಗವದ್ಗೀತೆಯ ಸಾಂಖ್ಯಯೋಗದ ೬೬ನೇ ಶ್ಲೋಕದಲ್ಲಿ ಶ್ರೀಕೃಷ್ಣ ಪರಮಾತ್ಮ ನಮ್ಮ ಏಕಾಗ್ರತೆ ಮತ್ತು ಧ್ಯಾನ ಹೇಗಿರಬೇಕೆಂಬುದನ್ನು ಮನದಟ್ಟು ಮಾಡಿದ್ದಾನೆ.

ವಿದ್ಯಾರ್ಥಿಗಳ ಭವಿಷ್ಯವನ್ನು ತೀರ್ಮಾನ ಮಾಡುವಲ್ಲಿ ಈ ಏಕಾಗ್ರತೆಯು ಬಹಳ ಮುಖ್ಯವಾದ ಅಂಶ. ಸಿನಿಮಾ ನೋಡುವಾಗ, ಸಿನಿಮಾ ಹಾಡುಗಳನ್ನು ಕೇಳುವಾಗ ಇರುವಂತಹ ಶ್ರದ್ಧೆ, ಏಕಾಗ್ರತೆ ಪಾಠ ಕೇಳುವಾಗ, ಒಳ್ಳೆಯ ವಿಚಾರಗಳನ್ನು ತಿಳಿದುಕೊಳ್ಳುವಾಗ ಇರುವುದಿಲ್ಲ. ಹೀಗಾಗಿ ಅದೆಷ್ಟೋ ವಿದ್ಯಾರ್ಥಿಗಳು ಎಷ್ಟೇ ಓದಿದರೂ, ಬರೆದರೂ ತಲೆಗೆ ಹೋಗುವುದೇ ಇಲ್ಲವೆಂದು ತಮ್ಮ ಅಳಲನ್ನು ತೋಡಿಕೊಳ್ಳುವುದುಂಟು. ಹಾಗಾಗಿ ಮನಸ್ಸಿನಲ್ಲಿ ಗೊಂದಲವಿರುವ, ಏಕಾಗ್ರತೆಯನ್ನು ಗಳಿಸುವುದು ಹೇಗೆಂಬ ಚಿಂತೆಯಲ್ಲಿರುವ ವಿದ್ಯಾರ್ಥಿಗಳು ಒಮ್ಮೆ ವಿವೇಕಾನಂದರ ಜೀವನವನ್ನು ಅಧ್ಯಯನ ಮಾಡಿದಾಗ ಏಕಾಗ್ರತೆಯನ್ನು ಗಳಿಸಿಕೊಳ್ಳುವುದು ಹೇಗೆಂಬುದು ತಿಳಿಯುವುದು, ಸ್ವಾಮೀಜಿಯವರ ಏಕಾಗ್ರತೆಯ ಬಗ್ಗೆಯೂ ತಿಳಿಯುವುದು.

ಸ್ವಾಮಿ ವಿವೇಕಾನಂದರು ನರೇಂದ್ರನಾಗಿದ್ದಂತಹ ಸಂದರ್ಭದಲ್ಲಿ ತನ್ನ ಸಹಪಾಠಿಗಳ ಜೊತೆಗೆ ಕೂಡಿಕೊಂಡು ಆಟಕ್ಕಾಗಿ ದೇವರ ಪೂಜೆ, ಭಜನೆ ಮಾಡಿ ಧ್ಯಾನಕ್ಕೆ ಕುಳಿತರು. ಕುಳಿತ ಹಲವು ಹುಡುಗರು ತಮ್ಮ ಕಣ್ಣನ್ನು ಮುಚ್ಚಿದರೂ ಅವರುಗಳ ಪ್ರಜ್ಞೆಯೆಲ್ಲಾ ಸುತ್ತ-ಮುತ್ತಲಿನ ವಸ್ತುವಿನ ಕಡೆಗೆ ಹರಿದಾಡುತ್ತಿದ್ದವು. ಆದರೆ ನರೇಂದ್ರ ಮಾತ್ರ ತನ್ನನ್ನು ಸಂಪೂರ್ಣವಾಗಿ ಮರೆತು ಕುಳಿತಿದ್ದ. ಆ ಸಮಯದಲ್ಲಿ ಬಂದ ಹಾವನ್ನು ಕಂಡು ನರೇಂದ್ರನ ಸಹಪಾಠಿಗಳು ದೂರ ಓಡಿ ನರೇಂದ್ರನಿಗೆ, ''ಓ ನರೇಂದ್ರ, ಹಾವು ಬಂದಿದೆ, ನಿನ್ನ ಹತ್ತಿರಕ್ಕೆ ಬರುತ್ತಿದೆ, ಎದ್ದು ಓಡು'' ಎಂದು ಚೀರಿದರೂ ಕೂಡ ನರೇಂದ್ರನಿಗೆ ಮಾತ್ರ ಏನೂ ಕೇಳಿಸದು, ಏನೂ ತಿಳಿಯದು, ಏನೂ ಕಾಣದು. ಏಕೆಂದರೆ ಆತ ತನ್ನ ಅಂತರಂಗಕ್ಕೆ ಇಳಿದುಬಿಟ್ಟಿದ್ದ. ಇದೇ ನಿಜವಾದ ಏಕಾಗ್ರತೆ, ಇದೇ ನಿಜವಾದ ಧ್ಯಾನ. ಇಲ್ಲಿ ನಾವು ಸೂಕ್ಷ್ಮವಾಗಿ ಈ ಘಟನೆಯನ್ನು ಅವಲೋಕಿಸಿ ನೋಡಿದರೆ, ವಿದ್ಯಾರ್ಥಿಗಳು ಮತ್ತು ಸಾಧಕರು ಇದರಿಂದ ಸಾಕಷ್ಟು ಕಲಿಯಬೇಕಾಗಿರುವುದು ಕಂಡುಬರುತ್ತದೆ.

ಸ್ವಾಮಿ ವಿವೇಕಾನಂದರು ಧ್ಯಾನಕ್ಕೆ ಕುಳಿತುಕೊಳ್ಳುವಾಗ ಆತನ ಜೊತೆಗಾರರೂ ಸಹ ಧ್ಯಾನಕ್ಕೆ ಕುಳಿತರು. (ವಿದ್ಯಾರ್ಥಿಗಳು ಮತ್ತು ಸಾಧಕರು ಸಹ ತಮ್ಮ ಹಲವಾರು ಜೊತೆಗಾರರೊಂದಿಗೆ ಶಾಲೆಗೆ ಹೋಗುತ್ತಿದ್ದರು.) ನರೇಂದ್ರನ ಜೊತೆಗಾರರು ಆಟಕ್ಕಾಗಿ ದೇವರ ಮೂರ್ತಿ, ಪೂಜೆ, ಭಜನೆ ಎಂಬ ಅಸ್ತ್ರಗಳನ್ನು ಉಪಯೋಗಿಸಿದರು. (ವಿದ್ಯಾರ್ಥಿಗಳು ಪುಸ್ತಕ, ಪೆನ್ನು ಎಂಬ ಅಸ್ತ್ರಗಳನ್ನು ಉಪಯೋಗಿಸುತ್ತಾರೆ.) ಎಲ್ಲರೂ ಧ್ಯಾನ ಮಾಡುವಾಗ ನರೇಂದ್ರನೊಬ್ಬನನ್ನು ಬಿಟ್ಟು ಉಳಿದವರು ಕಣ್ಣು ಮುಚ್ಚಿದರೂ ಅವರ ಪ್ರಜ್ಞೆ ಸುತ್ತಮುತ್ತ ಇದ್ದ ವಸ್ತುಗಳ ಕಡೆಗೆ ಹರಿದಾಡುತ್ತಿತ್ತು.

(ಇಲ್ಲಿ ಹಾಗೆಯೇ, ಶಾಲೆಯಲ್ಲಿ ಗುರುಗಳು ಪಾಠಮಾಡುವಾಗ ಹಲವಾರು ವಿದ್ಯಾರ್ಥಿಗಳು ತರಗತಿಯಲ್ಲಿ ಕುಳಿತರೂ ಸಹ ಅವರ ಪ್ರಜ್ಞೆಯು ಊಟ, ಸಿನಿಮಾ, ಕ್ರಿಕೆಟ್ ಇತ್ಯಾದಿ ಪ್ರಾಪಂಚಿಕ ವಿಚಾರಗಳ ಕಡೆಗೆ ಹರಿದಾಡುತ್ತಿರುತ್ತದೆ.)

ಆದರೆ ನರೇಂದ್ರನೊಬ್ಬ ಮಾತ್ರ ತನ್ನನ್ನು ತಾನು ಮರೆತು ತಾನು ಸಾಧಿಸಬೇಕಿದ್ದ ಅಂತರಂಗದೊಳಗೆ ಮಗ್ನನಾಗಿ ಕುಳಿತ. (ಇದೇ ರೀತಿಯಾಗಿ ಶಾಲೆಯಲ್ಲಿರುವ ಸಾವಿರಾರು ವಿದ್ಯಾರ್ಥಿಗಳಲ್ಲಿ ನರೇಂದ್ರನಂತಹ ಒಬ್ಬರೋ ಅಥವಾ ಇಬ್ಬರೋ ತಮ್ಮ ಎಲ್ಲಾ ಪ್ರಾಪಂಚಿಕ ಆಲೋಚನೆ, ಕೆಟ್ಟವಿಚಾರಗಳನ್ನು ಬಿಟ್ಟು ತಮ್ಮ ಓದಿನ ಕಡೆಗೆ ಮಾತ್ರ ಮಗ್ನರಾಗಿರುತ್ತಾರೆ ಮತ್ತು ಗುರುಗಳು ಹೇಳಿದ ವಿಚಾರಗಳ ಕಡೆಗೆ ಅವರ ಮನಸ್ಸಿರುತ್ತದೆ.) ಇದೇ ನಿಜವಾದ ಏಕಾಗ್ರತೆ. ಇದೇ ನಿಜವಾದ ಸಾಧನೆ. ಇಂತಹವರೇ ನರೇಂದ್ರನಂತಹ ಸಾಧಕರಾಗುತ್ತಾರೆ.

ಸ್ವಾಮಿ ವಿವೇಕಾನಂದರ ಜೀವನದಲ್ಲಿ ಮತ್ತೊಂದು ಘಟನೆಯನ್ನು ನೋಡಿದಾಗ ಅವರಲ್ಲಿ ಏಕಾಗ್ರತೆ ಎಷ್ಟಿತ್ತೆಂಬುದನ್ನು ಅರಿಯಬಹುದಾಗಿದೆ. ಮೀರತ್‌ನ ಸಾರ್ವಜನಿಕ ಗ್ರಂಥಾಲಯದಲ್ಲಿ ಸರ್ ಜಾನ್ ಕೆಲಬೆಕ್ ಎಂಬ ವ್ಯಕ್ತಿ ಬರೆದಿರುವ ಬೃಹತ್ ಗ್ರಂಥಗಳನ್ನು ಎರವಲು ಪಡೆದು, ಒಂದೇ ದಿನದಲ್ಲಿ ಓದಿ ಮುಗಿಸಿ ಅದನ್ನು ವಾಪಸ್ಸು ಕೊಡಲು ಹೋದಾಗ ಆ ಲೈಬ್ರೆರಿಯನ್ ಕೇಳುತ್ತಾರೆ ''ನೀವು ನಿಜವಾಗಿಯೂ ಇದನ್ನು ಓದಿರುವಿರೋ ಅಥವಾ ಒಳಗಿನ ಚಿತ್ರಗಳನ್ನು ನೋಡಿ ಕೊಡುತ್ತಿರುವಿರೋ'' ಎಂದು. ಆಗ ಸ್ವಾಮೀಜಿಯವರ ಉತ್ತರ ಹೀಗಿತ್ತು, ''ಆ ಪುಸ್ತಕದ ಯಾವ ವಿಷಯವನ್ನಾದರೂ ಕೇಳಿ. ಅದು ಯಾವ ಪುಟದಲ್ಲಿದೆ ಎಂಬುದನ್ನು ಮತ್ತು ಅದರ ವಿಷಯವನ್ನು ಸ್ಪಷ್ಟವಾಗಿ ತಿಳಿಸುತ್ತೇನೆ'' ಎಂದು. ಆತನಿಗೆ ಇವರ ಮಾತಿನ ಮೇಲೆ ನಂಬಿಕೆ ಬಾರದೆ ಪ್ರಶ್ನೆಯನ್ನು ಕೇಳಿದಾಗ, ಸ್ವಾಮೀಜಿ ಆ ಪುಸ್ತಕದ ವಾಕ್ಯವನ್ನೇ ಹೇಳುತ್ತಾ ಆ ಲೈಬ್ರೆರಿಯನ್‌ರ ಪ್ರಶ್ನೆಗೆ ಉತ್ತರಿಸಿದರು. ಇದಲ್ಲವೇ ನಿಜವಾದ ಏಕಾಗ್ರತೆ?





# ಸೋದರಿ ನಿವೇದಿತಾ

## (ನಾಟಕ)

ರಚನೆ
ಪಾಂಡುರಂಗ ಜೋಯಿಸ್ ಕೆ.ಎನ್.
ಸರಗೂರು ರಮೇಶ್

**ಭಾಗ ೧**

ಸೋದರಿ ನಿವೇದಿತಾಳ ಜೀವನವನ್ನು ಆಧರಿಸಿದ ನಾಟಕವನ್ನು ಮೈಸೂರು ಶ್ರೀರಾಮಕೃಷ್ಣ ವಿದ್ಯಾಶಾಲೆಯ ೨೦೧೬ರ ವಾರ್ಷಿಕೋತ್ಸವದಲ್ಲಿ ಅತ್ಯಂತ ಯಶಸ್ವಿಯಾಗಿ ಪ್ರದರ್ಶಿಸಲಾಯಿತು. ಲೇಖಕರೇ ನಿರ್ದೇಶಿಸಿ ಪ್ರದರ್ಶಿಸಿದ ಈ ನಾಟಕವನ್ನು ನಿವೇದಿತಾಳ ೧೫೦ನೇ ಜನ್ಮ ಶತಮಾನೋತ್ಸವವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ಪ್ರಕಟಿಸುವುದು ಸೂಕ್ತವೆಂದು ಇಲ್ಲಿ ಮೂರು ಕಂತುಗಳಲ್ಲಿ ನೀಡುತ್ತಿದ್ದೇವೆ. ಈ ನಾಟಕವನ್ನು ಯಾವುದೇ ಸಂಘ-ಸಂಸ್ಥೆಗಳು, ಶಾಲಾಕಾಲೇಜುಗಳು ಪ್ರದರ್ಶಿಸಬಹುದಾಗಿದೆ.

### ಐರ್ಲೆಂಡ್

***ವಾಣಿ:*** *ಐರ್ಲೆಂಡಿನ ಡಂಗ್‌ನಾನ್ ಎಂಬ ಪ್ರದೇಶದಲ್ಲಿ ಸ್ಯಾಮುಯಲ್ ರಿಚ್ಮಂಡ್ ಎಂಬುವರು ಅಲ್ಲಿನ ಚರ್ಚಿನ ಪಾದ್ರಿಯಾಗಿದ್ದರು. ಇವರು ದೇಶಭಕ್ತಿ, ದೈವಭಕ್ತಿ ಗುಣಗಳನ್ನು ಹೊಂದಿದ್ದರು. ಬಡವರಿಗೆ ಅನುಕಂಪ ಪಡುವ ಸ್ವಭಾವ ಅವರದು. ಅವರಿಗೆ ಧರ್ಮ ಎಂದರೆ ಸೇವೆಯಾಗಿತ್ತು. ೧೮೬೭ ಅಕ್ಟೋಬರ್ ೨೮ ರಂದು.*

### ದೃಶ್ಯ -೧

**(ಸ್ಯಾಮುಯಲ್ ರಿಚ್ಮಂಡ್ ನೋಬಲ್ ಐರ್ಲೆಂಡಿನ ಆಸ್ಪತ್ರೆಯ ಮುಂಭಾಗದಲ್ಲಿ. ನಿವೇದಿತಾ ಚಿಕ್ಕಮಗು; ನಂತರ ಹುಡುಗಿಯಾಗಿ.)**



*ಕಲೆ: ಸುನಿಲ್ .ಜಿ.ಟಿ*

**ಸ್ಯಾಮುಯಲ್ :** ಹೇ ಜೀಸಸ್... ನನ್ನ ಹೆಂಡತಿ ಮೇರಿ ಇಸಾಬೆಲ್ ಈ ಆಸ್ಪತ್ರೆಯಲ್ಲಿ ನಮ್ಮ ಮೊದಲ ಮಗುವಿನ ಪ್ರಸವ ತ್ರಾಸದದಲ್ಲಿದ್ದಾಳೆ. ಹೇ ಜೀಸಸ್.... ಆ ಮಗು ಯಾವ ಆತಂಕವೂ ಇಲ್ಲದೆ ಜನಿಸಿದರೆ ಆ ಮಗುವನ್ನು ದೇವರ ಸೇವೆಗೆ ಅರ್ಪಿಸುತ್ತೇನೆ. ಹೇ ಪ್ರಭು...

(ಮಗು ಅಳುವ ಶಬ್ದ. ಸ್ಯಾಮುಯಲ್ ಆಸ್ಪತ್ರೆಯಿಂದ ಮಗುವನ್ನು ತಂದು)

**ಸ್ಯಾಮುಯಲ್ :** ಹೇ ಜೀಸಸ್.... ಈ ಮಗುವನ್ನು ನಿನಗೆ ಹಾಗೂ ಜನರ ಸೇವೆಗೆ ಅರ್ಪಿಸುತ್ತೇನೆ. ಇವಳಿಗೆ ನಾನು ಮಾರ್ಗರೆಟ್ ಎಲಿಜಬತ್ ನೋಬಲ್ ಎಂದು ನಾಮಕರಣ ಮಾಡುತ್ತೇನೆ. ಮಾರ್ಗರೆಟ್......

(ಮಗುವನ್ನು ಒಳಗೆ ಇಟ್ಟು - ಸ್ಯಾಮುಯಲ್ - ಹುಡುಗಿಯೊಂದಿಗೆ ಆಟ) (ಆಗ ವಾಣಿ)

***ವಾಣಿ:*** *ಮಾರ್ಗರೆಟ್ ನೋಬಲ್ ತನ್ನ ತಂದೆಯನ್ನು ಪ್ರೀತಿಸುತ್ತಿದ್ದಳು. ಅವಳು ಚಿಕ್ಕವಳಿರುವಾಗಲೇ ತಂದೆಯು ಅವಳಿಗೆ ದೇಶಭಕ್ತರ ಕಥೆಗಳನ್ನು ಹೇಳಿದರು, ಬಡವರ ಸೇವೆಯಲ್ಲಿ ಪಾಲ್ಗೊಳ್ಳುವಂತೆ ಮಾಡಿದರು. ಅವಳು ಕೆಲವು ಅನಾಥ ಮನೆಗಳಿಗೆ ತಂದೆಯೊಂದಿಗೆ ಹೋಗುತ್ತಿದ್ದಳು. ಅಜ್ಜ ಹ್ಯಾಮಿಲ್ಟನ್ ಸೇನೆಯಲ್ಲಿದ್ದರು, ಅವರಿಂದ ಮೊಮ್ಮಗಳು ಅಪಾರ ಧೈರ್ಯ, ದೇಶಪ್ರೇಮವನ್ನು ಪಡೆದರೆ, ತಾಯಿಯಿಂದ ಸೌಂದರ್ಯ, ಕೋಮಲತೆಗಳನ್ನು, ತಂದೆಯಿಂದ ಅನುಕಂಪವನ್ನು ಪಡೆದಳು. ಇದರಿಂದ ಅನುಕಂಪ ಪಡುವುದು ಅವಳ ಬಾಲ್ಯದ ಸ್ವಭಾವವಾಯಿತು. ಮಾರ್ಗರೆಟ್ ಚಿಕ್ಕಂದಿನಿಂದಲೂ ದಿಟ್ಟತನ, ಧೈರ್ಯ, ಸತ್ಯಸಂಧತೆಗಳನ್ನು ತನ್ನ ಮನೆತನದಿಂದಲೇ ಬಳುವಳಿಯಾಗಿ ಪಡೆದಳು. ಇದೇ ಸಂದರ್ಭದಲ್ಲಿ ಸ್ಯಾಮುಯಲ್‌ನ ಸ್ನೇಹಿತನಾದ, ಭಾರತದಿಂದ ಹಿಂದಿರುಗಿದ ಧರ್ಮಪ್ರಚಾರಕನೊಬ್ಬನು ಸ್ಯಾಮುಯಲ್‌ನನ್ನು ನೋಡಲು ಬಂದನು.*

**ಹಿರಿಯ ಪಾದ್ರಿ:** (ಇವರ ಬಳಿಗೆ ಬಂದು ಅವಳ ಧೈರ್ಯ, ತೀಕ್ಷ್ಣ ಬುದ್ಧಿಗಳನ್ನು ಗಮನಿಸಿ ಮಾರ್ಗರೆಟ್‌ಳಿಗೆ) ನನ್ನನ್ನು ಕರೆದಂತೆಯೇ ಭಾರತವು ನಿನ್ನನ್ನೂ ಕರೆದೀತು. ಭಾರತ ಭೂಮಿಯು ಹತ್ತು ಹಲವು ಸಂಸ್ಕೃತಿಯ ಬೀಡು, ಶಾಂತಿ ಸೌಹಾರ್ದತೆಯ ತೌರೂರು, ಅಧ್ಯಾತ್ಮದ ಆಗರ.... ನೀನು ಅಲ್ಲಿಗೆ ಹೋಗುವ ಸದವಕಾಶ ಸಿಗಲಿದೆ ಎಂದೆನಿಸುತ್ತಿದೆ. ಸಿದ್ಧಳಾಗು, ನೀನು ಭರತಖಂಡದಲ್ಲಿ ಸೇವೆ ಮಾಡುವೆ.

**ಮಾರ್ಗರೆಟ್:** (ಪಾದ್ರಿಗೆ ನಮಸ್ಕರಿಸಿ ಕುತೂಹಲದಿಂದ) ಆಗಲಿ ಸ್ವಾಮಿ... ಓ ಪ್ರಭುವೇ! (ಮೇಲೆ ನೋಡಿ ಕೈಮುಗಿಯುವಳು.)

**(ಮುಕ್ತಾಯ)**

### ಲಂಡನ್

***ವಾಣಿ :*** *ಮುಂದೆ ಸ್ಯಾಮುಯಲ್ ಪತ್ನಿಯೊಡನೆ ಇಂಗ್ಲೆಂಡ್‌ಗೆ ಬಂದು ಬೋಧಕ ವೃತ್ತಿಯನ್ನು ಕೈಗೊಂಡನು.*

*ಮಾರ್ಗರೆಟ್‌ಳ ವಿದ್ಯಾಭ್ಯಾಸವು ಲಂಡನ್‌ನಲ್ಲಿ ನಡೆಯಿತು. ಮಾರ್ಗರೆಟ್ ಶಾಲೆಯಲ್ಲಿರುವಾಗಲೇ ನಾಯಕತ್ವದ ಗುಣಗಳನ್ನು ಮೈಗೂಡಿಸಿಕೊಂಡಿದ್ದಳು. ಅವಳಲ್ಲಿ ದಿಟ್ಟತನ ಪ್ರಾಮಾಣಿಕತೆ, ಪರಿಶುದ್ಧತೆ, ಧೈರ್ಯ*

*ಹಾಗೂ ನಿಃಸ್ವಾರ್ಥ ಮನೋಭಾವಗಳಿದ್ದವು. ಇವು ಅವಳ ಅಮೂಲ್ಯ ಆಸ್ತಿಯಾಗಿದ್ದವು. ಆ ವಯಸ್ಸಿನಲ್ಲೇ ಬೈಬಲನ್ನು ಪೂರ್ತಿ ಓದಿದ್ದಳು. ಸಂಗೀತ, ಚಿತ್ರಕಲೆ ಮತ್ತು ನೈಸರ್ಗಿಕ ವಿಜ್ಞಾನದಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದಳು.*

## ದೃಶ್ಯ - ೨

**(ಶಾಲೆಯಲ್ಲಿ ಪಾಠ. ಸ್ಕ್ರೀನ್ ಮೇಲೆ ಶಾಲೆ)**

*ವಾಣಿ : ಮಾರ್ಗರೆಟ್‌ಗೆ ೧೭ ವರ್ಷವಾದಾಗ – ಅಂದರೆ ೧೮೮೪ರಲ್ಲಿ ಪದವಿ ಪಡೆದು ಶಿಕ್ಷಕ ವೃತ್ತಿ ಹಾಗೂ ಪತ್ರಿಕೋದ್ಯಮ ಮಾಡತೊಡಗಿ, ೧೮೯೨ರಲ್ಲಿ ವಿಂಬಲ್ಡನ್ನಿನಲ್ಲಿ ತನ್ನದೇ ಆದ ಶಾಲೆಯನ್ನು ಆರಂಭಿಸಿದಳು. ತನ್ನದೇ ಆದ ನವಶಿಕ್ಷಣ ಪದ್ಧತಿಯಲ್ಲಿ ಆಟ, ಪಾಠಗಳ ಮೂಲಕ ಬಡ ವಿದ್ಯಾರ್ಥಿಗಳಿಗೆ ಸೇವೆ ಸಲ್ಲಿಸುತ್ತಿದ್ದಳು. ಹೀಗೆ ಪ್ರಸಿದ್ಧಿ ಪಡೆದು ಲಂಡನ್ನಿನ ಬುದ್ಧಿಜೀವಿಗಳ ವಲಯದಲ್ಲಿ ತನ್ನನ್ನು ಗುರುತಿಸಿಕೊಂಡಳು. ಅನುಭವಕ್ಕಿಂತ ನಂಬಿಕೆಗೆ ಒತ್ತು ನೀಡುವ ಚರ್ಚ್ ನಿಯಂತ್ರಿತ ಧಾರ್ಮಿಕ ಜೀವನ ಅವಳಿಗೆ ಶಾಂತಿ ತರಲಿಲ್ಲ. ಮಾರ್ಗರೆಟ್ ತನ್ನ ಹದಿನೆಂಟನೇ ವರ್ಷದಲ್ಲಿ ಧರ್ಮವನ್ನು ಅನುಸರಿಸಿ ಶಾಂತಿ ಪಡೆಯಬೇಕೆಂಬ ನಿಲುವಿಗೆ ಬಂದಳು.*

## ದೃಶ್ಯ-೩

**(ಮಾರ್ಗರೆಟ್ ಮತ್ತು ಸ್ಯಾಮುಯಲ್ ನಡುವೆ ವಾದ)**

**ಸ್ಯಾಮುಯಲ್:** ನಿಷ್ಠೆಯಿಂದ ನೀನು ಚರ್ಚ್‌ಗೆ ಹೋಗುತ್ತಿರು ಧರ್ಮ ಆಚರಣೆಯನ್ನು ತಪ್ಪಿಸಬೇಡ.

**ಮಾರ್ಗರೆಟ್:** ಇಂತಹ ಯಾಂತ್ರಿಕ ಆಚರಣೆಗಳಿಂದಲೇ ನಾನು ತೃಪ್ತಳಾಗಬೇಕೆ?

**ಸ್ಯಾಮುಯಲ್:** ಏನು ಹೇಳುತ್ತಿರುವೆ ಮಾರ್ಗರೆಟ್?

**ಮಾರ್ಗರೆಟ್:** ಧರ್ಮವೆಂದರೆ ಬರಿ ನಂಬಿಕೆಯಲ್ಲ ತಂದೆ. ಅದು ಸಿದ್ಧಾಂತಗಳ ಕಂತೆಯಲ್ಲ.

**ಸ್ಯಾಮುಯಲ್:** ಮತ್ತೇನು?

**ಮಾರ್ಗರೆಟ್:** ಧರ್ಮವೆಂದರೆ ಸ್ವಾನುಭವ ಮತ್ತು ಸಾಕ್ಷಾತ್ಕಾರ. ಜೀವನವನ್ನೇ ಪರಿವರ್ತಿಸುವ ಬೆಳಕಾಗಬೇಕು ಧರ್ಮ, ಅದರಿಂದ ಶಾಂತಿ ಲಭಿಸಬೇಕು.

**ಸ್ಯಾಮುಯಲ್:** ಮಗು, ಈ ರೀತಿಯಾಗಿ ಕ್ರಿಸ್ತನನ್ನು ಹಂಬಲಿಸಿದವರು ಶ್ರೇಷ್ಠರು. ಸಂತಳಾಗಬೇಕೆಂಬ ನಿನ್ನ ಮೇಲೆ ದೇವರ ಅನುಗ್ರಹವಿರಲಿ, ನಿನ್ನ ಸತ್ಯಾನ್ವೇಷಣೆಯು ಫಲಕಾರಿಯಾಗಲಿ.

**ಮಾರ್ಗರೆಟ್:** ಸತ್ಯವನ್ನು ಅನುಭವಿಸದೆ ನಾನು ವಿರಮಿಸಲಾರೆ ತಂದೆ, ನಿಮಗೆ ನನ್ನ ವಂದನೆಗಳು. ನನ್ನ ಹೃದಯಾಂತರಾಳದಲ್ಲಿ ಅಗ್ನಿಯಂತೆ ಪ್ರಜ್ವಲಿಸುತ್ತಿರುವ ಅಭೀಪ್ಸೆಯನ್ನು ಭಗವಂತನೇ ಪೂರ್ಣ ಮಾಡಬೇಕು.

**ಸ್ಯಾಮುಯಲ್:** ನಿನಗೆ ಮಂಗಳವಾಗಲಿ.

*ವಾಣಿ : ಮುಂದೆ ಮಾರ್ಗರೆಟ್ ಬುದ್ಧನ ಜೀವನ ಮತ್ತು ಅವನ ಸಂದೇಶವನ್ನು ಓದತೊಡಗಿದಳು. ಆದರಿಂದ ತಾತ್ಕಾಲಿಕ ತೃಪ್ತಿ ಪಡೆದಳು. ಆ ಸಮಯದಲ್ಲಿ ಸ್ವಾಮಿ ವಿವೇಕಾನಂದರು ಅಮೇರಿಕಾದ ಚಿಕಾಗೋ ಧರ್ಮ ಸಮ್ಮೇಳನದಿಂದ ಪ್ರಖ್ಯಾತರಾಗಿದ್ದರು; ವೇದಾಂತ ಬೋಧಿಸಲು ಅವರು ಇಂಗ್ಲೆಂಡಿಗೆ ತೆರಳಿದರು. ಲಂಡನ್ನಿನಲ್ಲಿ ಒಂದು ದಿನ ಸಂಪ್ರದಾಯಸ್ಥರ ಒಂದು ಕೂಟದಲ್ಲಿ ಸ್ವಾಮಿ ವಿವೇಕಾನಂದರ ಉಪನ್ಯಾಸವನ್ನು ಕೇಳಲು ಮಾರ್ಗರೆಟ್ ಹೋದಳು.*

## ದೃಶ್ಯ ೪

**ಲಂಡನ್‌ನಲ್ಲಿ**

(ಒಂದು ಮನೆಯಲ್ಲಿ ಉಪನ್ಯಾಸ. ೧೫-೧೬ ಜನರಿದ್ದಾರೆ. ಪ್ರಶ್ನೋತ್ತರ ನಡೆಯುತ್ತಿದೆ.)



**ಸ್ವಾಮೀಜಿ :** ಬಹುಜನರ ಹಿತಕ್ಕೆ ಪ್ರಪಂಚದ ಅತ್ಯಂತ ಶ್ರೇಷ್ಠ ವ್ಯಕ್ತಿಗಳು ತಮ್ಮನ್ನು ಬಲಿದಾನ ಮಾಡಿಕೊಳ್ಳಬೇಕು. ಈ ಪ್ರಪಂಚಕ್ಕೆ ನೂರಾರು ಮಂದಿ ಬುದ್ಧರು, ಅನುಕಂಪ ಮತ್ತು ಪ್ರೀತಿಯಿಂದ ಪ್ರೇರಿತರಾದವರು ಬೇಕಾಗಿದ್ದಾರೆ.

**ವಿದೇಶೀಯ:** ಮಾನವರಾದ ನಾವು ಮತ್ತೆ ಮತ್ತೆ ದುಃಖ, ಯಾತನೆಗಳಲ್ಲಿ, ರೋಗ ಮೃತ್ಯುಗಳಲ್ಲಿ ಯಾಕೆ ಬಳಲುತ್ತೇವೆ ಸ್ವಾಮೀಜಿ?

**ಸ್ವಾಮೀಜಿ :** ಈ ಪ್ರಶ್ನೆಯನ್ನು ಮಾನವ ಮನಸ್ಸು ಪುರಾತನ ಕಾಲದಿಂದಲೂ ಕೇಳುತ್ತಲೇ ಬಂದಿದೆ. ಪಾಶ್ಚಿಮಾತ್ಯರು ಇದಕ್ಕೆ ತೃಪ್ತಿಕರವಾದ ಉತ್ತರವನ್ನು ಇನ್ನೂ ಕಂಡುಹಿಡಿದಿಲ್ಲ. ಆದರೆ ಬಹಳ ಹಿಂದೆಯೇ ಭಾರತೀಯ ಋಷಿಗಳು ಮಾನವ ಬದುಕಿನ ಆಳವನ್ನು ಶೋಧಿಸಿ ಇದಕ್ಕೆ ಪರಿಹಾರ ಕಂಡುಹಿಡಿದಿದ್ದಾರೆ.

**ವಿದೇಶೀಯ:** ಆ ಪರಿಹಾರವೇನು ಸ್ವಾಮೀಜಿ?

**ಸ್ವಾಮೀಜಿ :** ಈ ಬಾಹ್ಯ ಬದುಕಿನ ಹಿಂದೆ ನಿತ್ಯವೂ, ಶಾಶ್ವತವೂ, ಆದ ಸತ್ಯವಿದೆ. ಅದನ್ನು ಭಾರತ ಬಹಳ ಹಿಂದೆಯೇ ಕಂಡುಕೊಂಡಿತು.

**ವಿದೇಶೀಯ:** ಹಾಗಾದರೆ ಪಾಶ್ಚಿಮಾತ್ಯ ದೇಶಗಳು ಹೇಗೆ ಇಷ್ಟೊಂದು ಮುಂದುವರಿದವು ಸ್ವಾಮೀಜಿ?

**ಸ್ವಾಮೀಜಿ:** ಬರ್ಬರತೆ, ಶೋಷಣೆ, ದಬ್ಬಾಳಿಕೆ ಮತ್ತು ಯುದ್ಧೋತ್ಸಾಹದಿಂದ ನಿಮ್ಮ ರಾಷ್ಟ್ರ ಇತರರನ್ನು ತುಳಿದಿದೆ.

**ಮಾರ್ಗರೆಟ್:** ಕ್ಷಮಿಸಿ ಸ್ವಾಮೀಜಿ, ನಾನು ನಿಮ್ಮ ಮಾತನ್ನು ಒಪ್ಪುವುದಿಲ್ಲ.

**ಸ್ವಾಮೀಜಿ :** ಸೋದರಿ, ನೀವು ಒಪ್ಪುವುದಿಲ್ಲ ಎಂದು ನನಗೆ ಚೆನ್ನಾಗಿ ತಿಳಿದಿದೆ.

**ಮಾರ್ಗರೆಟ್:** ಅದು ಹೇಗೆ ತಮಗೆ ತಿಳಿದಿದೆ?

**ಸ್ವಾಮೀಜಿ :** ಸುತ್ತಲೂ ಸಮುದ್ರವಿರುವ ದ್ವೀಪದಂತಿರುವ ದೇಶದವರು ನೀವು. ಉಳಿದ ದೇಶಗಳಿಂದ ಸಂಪೂರ್ಣ ಪ್ರತ್ಯೇಕವಾಗಿದ್ದೀರಿ. ನಿಮ್ಮ ಮನಸ್ಸು ಕೂಡಾ ಒಂದು ದ್ವೀಪದಂತೆಯೇ ಪ್ರತ್ಯೇಕವಾಗಿ ಬಿಟ್ಟಿದೆ. ನಿಮ್ಮ ದೇಶದ ಈ ದೊಡ್ಡ ನಗರವನ್ನು ಕಟ್ಟಲು ಎಷ್ಟೊಂದು ಭವ್ಯ ನಗರಗಳನ್ನು ಹಾಳುಗೆಡವಿದ್ದೀರಿ, ಶೋಷಿಸಿದ್ದೀರಿ ಎಂಬುದು ನಿಮಗೆ ತಿಳಿದಿದೆಯೆ?

**ಮಾರ್ಗರೆಟ್:** (ಚಿಂತಾಕ್ರಾಂತಳಾಗುವಳು)

**ವಿದೇಶೀಯ:** ನಿಮ್ಮ ದೇಶದ ಜನ ಹಲವಾರು ಮೂಢನಂಬಿಕೆಗಳಿಂದ ಬದುಕುತ್ತಿಲ್ಲವೆ? ಕಲ್ಲು, ಮರ, ಲೋಹಗಳನ್ನು ಪೂಜಿಸುತ್ತಿಲ್ಲವೆ?

**ಸ್ವಾಮೀಜಿ:** ಇರಬಹುದು. ಆದರೆ ಕ್ರಮೇಣ ಮನಸ್ಸು ಈ ವಿಗ್ರಹಗಳ ಆರಾಧನೆಯ ಆಚೆಗೆ ಬೆಳೆಯುತ್ತದೆ. ನಾಮ-ರೂಪಗಳನ್ನೂ, ಕಾಲ-ದೇಶಗಳನ್ನು ಮೀರುತ್ತದೆ. ನಮ್ಮ ಸ್ವರೂಪವೇ ಎಲ್ಲೆಡೆಯೂ ಇರುವ ಸಚ್ಚಿದಾನಂದ ಬ್ರಹ್ಮ ಎಂದು ಅರಿಯುವುದೇ ಮಾನವ ಬದುಕಿನ ನಿಜವಾದ ಗುರಿ. ಅದು ನಂಬಿಕೆಯಲ್ಲ, ಸಾಕ್ಷಾತ್ಕಾರ! ನಾವು ಕೆಳಗಿನ ಸತ್ಯದಿಂದ ಉನ್ನತ ಸತ್ಯಕ್ಕೆ ವಿಕಾಸ ಹೊಂದುತ್ತಿರುವ ಜೀವಿಗಳು.

**ಮಾರ್ಗರೆಟ್:** ನಿಮ್ಮ ಆದರ್ಶಕ್ಕೆ ನಾನು ನನ್ನನ್ನು ಅರ್ಪಿಸಿಕೊಳ್ಳುತ್ತೇನೆ.

**ಸ್ವಾಮೀಜಿ:** ಭಗವಂತನೇ ನಮ್ಮ ಸರ್ವಸ್ವ ಎಂದು ಹೇಳುವ ಎದೆಗಾರಿಕೆಯುಳ್ಳ ೨೦ ಜನ ಯುವಕ ಯುವತಿಯರು ಇಂದು ಜಗತ್ತಿಗೆ ಬೇಕಾಗಿದ್ದಾರೆ, ಯಾರು ಸಿದ್ಧರಿದ್ದೀರಿ? ಭಗವಂತನೇ ಸರ್ವಸ್ವ.

**ಮಾರ್ಗರೆಟ್:** ನಾನು ಸಿದ್ಧಳಿದ್ದೇನೆ, ಈ ಆಂದೋಲನದ ನೇತೃತ್ವ ನಾನು ವಹಿಸುವೆ. ನನ್ನ ಗುರುದೇವರು ಅತಿಯಾಗಿ ಪ್ರೀತಿಸುವ ಭಾರತೀಯ ಜನರ ಸೇವೆ ಮಾಡುವೆ. ನಾನು ಭಾರತಕ್ಕೆ ಬಂದು ಸೇವೆ ಮಾಡಬೇಕೆಂದಿರುವೆನು.

**ಸ್ವಾಮೀಜಿ:** ನಿನಗೆ ನನ್ನ ಆಮಂತ್ರಣವಿದೆ. ಆದರೆ ನೀನು ಎದುರಿಸಬೇಕಾದ ಅನೇಕ ಕಠಿಣ ಸವಾಲುಗಳಿವೆ. ಅಲ್ಲಿ ಉರಿಬಿಸಿಲು, ನಮ್ಮಲ್ಲಿ ಕಷ್ಟ ಕಾರ್ಪಣ್ಯ ಮೂಢನಂಬಿಕೆಗಳಿಗೆ ಮಿತಿಯೇ ಇಲ್ಲ. ಇಂಗ್ಲೆಂಡಿನಲ್ಲಿರುವ ಅನುಕೂಲತೆಗಳು ಅಲ್ಲಿಲ್ಲ. ಬಡವರ ಮಧ್ಯೆ ಬದುಕಬೇಕಾಗಿ ಬರಬಹುದು. ವಿದೇಶೀಯರನ್ನು ನಮ್ಮ ಜನ ದೂರುತ್ತಾರೆ. ಈಗ ಹೇಳು, ನೀನು ಈ ಸೇವೆಗೆ ಸೇರುವುದಕ್ಕೆ ಸಿದ್ಧಳಾಗಿರುವೆಯಾ? ಒಂದು ವೇಳೆ ನೀನು ಹಿಂದಿರುಗಿ ಹೋದರೂ ಪರವಾಗಿಲ್ಲ.

**ಮಾರ್ಗರೆಟ್ :** ಆಗಲಿ ಸ್ವಾಮೀಜಿ, ನಾನು ಸಿದ್ಧಳಿದ್ದೇನೆ.

**ಸ್ವಾಮೀಜಿ :** ನಮ್ಮ ದೇಶದ ಜನರನ್ನು ಮೇಲೆತ್ತುವ ಕೆಲಸದಲ್ಲಿ ಸ್ತ್ರೀಯರು ಬೇಕಾಗಿದ್ದಾರೆ. ನೀನು ಅದಕ್ಕೆ ಸಮ್ಮತಿಯಿತ್ತರೆ ಭರತ ಖಂಡಕ್ಕೆ ದೊಡ್ಡ ಸಹಾಯವಾಗುವುದು.

**ಮಾರ್ಗರೆಟ್ :** (ಸಂತೋಷ) ಆಗಲಿ ಸ್ವಾಮೀಜಿ, ನನ್ನ ಜೀವನವನ್ನು ಬದಲಾಯಿಸಿ ಇಂಡಿಯಾ ದೇಶಕ್ಕೆ ಬರಲು ನಾನು ಬದ್ಧಳಾಗಿರುವೆನು.

**ಸ್ವಾಮೀಜಿ :** ನೀನು ಭವಿಷ್ಯ ಭರತಖಂಡದ ಪುತ್ರರಿಗೆ ದಾಸಿ ಮತ್ತು ಸಖಿ ಎಲ್ಲವೂ ಆಗು. (ಆಶೀರ್ವಾದ - ಸ್ವಾಮೀಜಿಯವರಿಂದ)

(ಮಾರ್ಗರೆಟ್ ನಮಸ್ಕರಿಸುವಳು)

**ಸ್ವಾಮೀಜಿ:** ನೀನು ಭಾರತವನ್ನು ಪ್ರೀತಿಸು, ಭಾರತಕ್ಕೆ ಸೇವೆ ಸಲ್ಲಿಸು. ಈ ದೇಶವನ್ನು ಪೂಜಿಸು. ಇದೇ ನೀನು ನನಗೆ ಸೇವೆ ಸಲ್ಲಿಸಬೇಕಾದ ರೀತಿ, ನಾನು ನಿನಗೆ ಭಾರತಕ್ಕೆ ಬರಲು ಆಮಂತ್ರಣವನ್ನು ಕೊಡುತ್ತಿದ್ದೇನೆ.

(ಮುಕ್ತಾಯ)

## ಮದರ್ ಲ್ಯಾಂಡ್

*ವಾಣಿ: ಮಾರ್ಗರೆಟ್ ೧೮೯೮ ಜನವರಿ ೨೮ರಂದು ಕೊಲ್ಕತ್ತೆಗೆ ಹಡಗಿನಿಂದ ಬಂದಿಳಿದಳು. ಸ್ವಾಮೀಜಿಯವರು ಅವಳನ್ನು ಸ್ವಾಗತಿಸಿ ಕರೆತರುವರು.*

### ದೃಶ್ಯ -೫

ಸ್ವಾಮೀಜಿಯವರು ಅವಳನ್ನು ಕರೆತರುವುದು



**ಸ್ವಾಮೀಜಿ:** ಮಾರ್ಗರೆಟ್, ನಿನಗೆ ನಮ್ಮ ಭಾರತಕ್ಕೆ ಸ್ವಾಗತ.

**ಮಾರ್ಗರೆಟ್:** ಈ ಭಾರತ ದೇಶದ ಮಣ್ಣಿನ ಪಾದಸ್ಪರ್ಶ ಮಾಡಲು ನಾನು ಹೆಮ್ಮೆ ಪಡುತ್ತೇನೆ, ಸ್ವಾಮೀಜಿ.

**ಸ್ವಾಮೀಜಿ :** ಮಾರ್ಗರೆಟ್, ನೀನು ಮೊದಲು ಶ್ರೀಮಾತೆ ಶಾರದಾದೇವಿಯವರ ಆಶೀರ್ವಾದ ಪಡೆ. ಶ್ರೀಮಾತೆಯವರು ಸಾಧಾರಣ ಸ್ತ್ರೀಯಲ್ಲ, ಗುರುದೇವ ಶ್ರೀರಾಮಕೃಷ್ಣರ ಸಹಧರ್ಮಿಣಿ. ಅವರು ತಾಯಿ ಆದಿಶಕ್ತಿಯ ಮೂರ್ತಸ್ವರೂಪ. ಸಕಲ ಚರಾಚರಗಳಿಗೆ ಆಶ್ರಯ ನೀಡಿ ಸಲಹುವ ಮಹಾಮಾತೆ. ಅವರ ಸನ್ನಿಧಿ ಪರಮ ಪವಿತ್ರವಾದುದ್ದು. ಅವರ ಅನುಗ್ರಹ ಮಂಗಳಕರ. ನೀನು ಅವರನ್ನು ಕಂಡು ಅವರ ಆಶೀರ್ವಾದವನ್ನು ಪಡೆ ಮಾರ್ಗ ರೆಟ್, ಅವರ ಪ್ರೇಮಕೃಪೆಯು ನಿನಗೆ ರಕ್ಷಾಕವಚವಾಗುವುದು.

**ಮಾರ್ಗರೆಟ್:** ನನ್ನಂತಹ ಪರಕೀಯಳನ್ನು ಅವರು ಸ್ವೀಕರಿಸುವರೇ, ಸ್ವಾಮೀಜಿ?

**ಸ್ವಾಮೀಜಿ:** (ಮುಗುಳ್ನಗುತ್ತಾ) ಅವರಿಗೆ ಪರಕೀಯ ಎಂಬುದು ಇಲ್ಲವೇ ಇಲ್ಲ! ಅವರಿಗೆ ಯಾರೂ ಹೊರಗಿನವರಲ್ಲ. ಎಲ್ಲರೂ ಅವರ ಮಡಿಲಿನಲ್ಲಾಡುವ ಮಕ್ಕಳಂತೆ. ಆತಂಕ ಬೇಡ, ನಿಶ್ಚಿಂತಳಾಗಿರು. ಅವರನ್ನು ಭೇಟಿ ಮಾಡಿದ ಕ್ಷಣವು ನಿನ್ನ ಬಾಳಿನ ಅಮೃತ ಘಳಿಗೆಯಾಗುವುದು.

*ವಾಣಿ: ಒಂದು ದಿನ ಅಂದರೆ ೧೮೯೮ ಮಾರ್ಚ್ ೧೭ ರಂದು ಮಾರ್ಗರೆಟ್ ಶ್ರೀಮಾತೆ ಶಾರದಾದೇವಿಯವರನ್ನು ಭೇಟಿ ಮಾಡಲು ಹೋದಳು. ನಿವೇದಿತಾ ಕಳೆದ ಶತಮಾನದ ಮಡಿವಂತಿಕೆಯ ಸ್ವಭಾವದವರಾದ ಶ್ರೀಮಾತೆ ವಿದೇಶಿಯಾದ ತನ್ನನ್ನು ಹೇಗೆ ಕಾಣುತ್ತಾರೋ ಎಂಬ ಸಂದೇಹದಲ್ಲಿದ್ದಳು - ಆದರೆ ಅವರು ಇವಳನ್ನು ಸ್ವಂತ ಮಗುವಿನಂತೆ ಕಂಡರು - ಮಾರ್ಗರೆಟ್ ಅವರಲ್ಲಿ ತನ್ನ ತಾಯಿಯನ್ನು ಕಂಡಳು.*

*(ಮುಂದಿನ ಸಂಚಿಕೆಗೆ)*

# ಶ್ರೀಮಾತೆಯವರ ಪತ್ರಗಳು - ೮

ಅನುವಾದ: **ಪ್ರವ್ರಾಜಿಕಾ ಧರ್ಮಪ್ರಾಣಾ**

### ಪತ್ರ - ೩೩

ಓಂ ರಾಮಕೃಷ್ಣ ಜಯತಿ

ಶರಣಂ ೫.೩.೧೯೦೮

ಪ್ರೀತಿಯ ಮಗೂ,

ನೀನು ಕಳುಹಿಸಿರುವ ಒಂದು ಜೋಡಿ ಸೀರೆಗಳು ಇಂದು ಸಿಕ್ಕಿದವು. ಸೀರೆಗಳು ಅತ್ಯಂತ ಸುಂದರವಾಗಿವೆ. ನಾನು ಅವನ್ನು ಉಪಯೋಗಿಸುವೆನು. ನೀನು ನನ್ನ ಆಶೀರ್ವಾದ ತೆಗೆದುಕೋ. ಹಾಗೂ ಶಾರದಾನಿಗೆ, ಹರಿಪದನಿಗೆ, ಮೋತಿಲಾಲ್‌ಗೆ ಮತ್ತು ಸುಶೀಲನಿಗೆ ನನ್ನ ಆಶೀರ್ವಾದ ಸ್ವೀಕರಿಸಲು ಹೇಳು. ಮತ್ತೆ ಕಾಳೀಪದನು (?) ಶ್ರೀ ಗುರುದೇವರ ಹೆಸರಿನಲ್ಲಿ ಉಪನ್ಯಾಸ ಮಾಡುವನೆಂದು ಕೇಳಿ ನಾನು ತುಂಬಾ ಆನಂದಪಟ್ಟೆ (ಮತ್ತು) ಅವನಿಗೆ ನನ್ನ ಆಶೀರ್ವಾದ ತಿಳಿಸು. ಅಲ್ಲದೆ ನಾನು ಅವನಿಗಾಗಿ ನಮಸ್ಕಾರ ಮಾಡಿರುವೆ. ಉಳಿದ ಬೇರೆ ಬೇರೆ ಭಕ್ತ ಜನರಿಗೆ ನನ್ನ ಆಶೀರ್ವಾದ ತಿಳಿಸು. ನಾನು ಸದ್ಯ ಚೆನ್ನಾಗಿದ್ದೇನೆ. ಮತ್ತು ಮನೆಯವರೆಲ್ಲರೂ ಒಂದು ರೀತಿ ಚೆನ್ನಾಗಿದ್ದಾರೆ. ಮತ್ತೆ ಪ್ರೀತಿಯ ಮಗನೆ, ನೀನು ಸ್ವಾಮಿ ತ್ರಿಗುಣಾತೀತನಿಗೆ ನನ್ನ ಆಶೀರ್ವಾದ ತಿಳಿಸು. ಮತ್ತು ಅವನಿಗೆ ಹೇಳಬೇಕು, ಅವನು ನನಗೆಂದು ಅಲ್ಲಿಂದ ಹಣ ಮನಿಯಾರ್ಡರ್ ಮಾಡಿದ್ದ, ನನಗೆ ಅದು ಇನ್ನೂ ಸಿಕ್ಕಿಲ್ಲ. ಇಂದು ಈ ವರ್ತಮಾನವನ್ನು ನಿನಗೆ ಬರೆದೆ. ಒಂದು ವೇಳೆ ಆ ಸ್ವಾಮೀಜಿ ನಿನ್ನ ಬಳಿ ಇದ್ದರೆ ಇದನ್ನು ತಿಳಿಸು. ಇತಿ–

ನಿಮ್ಮೆಲ್ಲರ ಶುಭಾಕಾಂಕ್ಷಿ ಮಾತೆ.

ಹಾಗೆಯೇ ದೇವಮಾತಾಳಿಗೆ ನನ್ನ ಆಶೀರ್ವಾದ ತಿಳಿಸು. ಇತಿ, ೧೩೧೪ ನೇ ವರ್ಷ, ತಾ. ೨೨ ಫಾಲ್ಗುಣ, ಗುರುವಾರ.

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***
*The Swami Ramakrishnanandaji*
*Sri Ramakrishna Home*
*Brodies' Road*
*Mylapore , Madras*

ವಿವರಣೆ: ದೇವಮಾತಾ ಎಂಬಾಕೆ ಅಮೇರಿಕದ ಭಕ್ತೆ. ಅವಳ ಹಿಂದಿನ ಹೆಸರು ಲೋರಾ ಗ್ಲೆನ್. ದೇವಮಾತಾ ಕೊಲ್ಕತ್ತಾಗೆ ಬಂದು ಶ್ರೀಮಾತೆಯವರ ದರ್ಶನ ಪಡೆದು, ಮಾತೆಯ ಅಹೇತುಕ ಪ್ರೀತಿಯನ್ನು ಪಡೆದು ಆನಂದದಿಂದ ಮುಗ್ಧಳಾಗಿದ್ದಳು.

### ಪತ್ರ - ೩೪

ಓಂ ರಾಮಕೃಷ್ಣ ಜಯತಿ

ಶರಣಂ ೧೯.೩.೧೯೦೮

ಪರಮ ಶುಭಾಶೀರ್ವಾದವನ್ನು ಮೊದಲು ತಿಳಿಸಿ, ವಿಶೇಷವೇನೆಂದರೆ,

ಪ್ರೀತಿಯ ಮಗು, ನಿನ್ನ ಪತ್ರ ಜೊತೆಯಲ್ಲಿ ಮನಿಯಾರ್ಡರ್ ಮೂಲಕ ೨೦ ರೂಪಾಯಿ ಸಿಕ್ಕಿತು. ನಿನಗೆ ನನ್ನ ಆಶೀರ್ವಾದ ಮತ್ತು ದೇವಗುರುಮಾತಾಳಿಗೆ ನನ್ನ ಆಶೀರ್ವಾದ ತಿಳಿಸು. ಅವಳಿಗೆ ಹೇಳು, ಆಕೆ ಶ್ರೀ ಠಾಕೂರರಿಗೆ ಉತ್ತಮ ಹೂವುಗಳಿಂದ ಮಾಲೆಯನ್ನು ಹಾಕಿ ಸಿಂಗರಿಸಿದ್ದಳು, ಇದನ್ನು ಕೇಳಿ ನಾನು ಎಲ್ಲಿಲ್ಲದ ಆನಂದವನ್ನು ಪಡೆದೆ ಎಂದು. ಅನೇಕ ಸದ್ ಬ್ರಾಹ್ಮಣರು ಭೋಜನವನ್ನು ಸ್ವೀಕರಿಸಿದರೆಂದು ತಿಳಿದು, ಇದರಿಂದ ನಾನು ಸಂತುಷ್ಟಳಾದೆ. ಆಳಸಿಂಗನ ಸಹೋದರಿಯ ಪತಿಗೆ ನನ್ನ ಆಶೀರ್ವಾದ ತಿಳಿಸು. ಮತ್ತೆ ಅವನಿಗೆ ಹೇಳಬೇಕು, ಏನೆಂದರೆ ಠಾಕೂರರ ವಚನಾಮೃತ ಗುಣಗಾನಕ್ಕೆ ನಾನು ಸಂತುಷ್ಟಳಾಗಿದ್ದೇನೆ ಎಂದು. ಎಲ್ಲ ಭಕ್ತವೃಂದದವರಿಗೂ ನನ್ನ ಆಶೀರ್ವಾದವನ್ನು ಈಗಲೇ ತಿಳಿಸು. ನಾನು ಸದ್ಯ ಚೆನ್ನಾಗಿದ್ದೇನೆ ಮತ್ತು ಮನೆಯಲ್ಲಿ ಎಲ್ಲರೂ ಚೆನ್ನಾಗಿದ್ದಾರೆ.

೧೩೧೪ ವರ್ಷ
ತಾ– ೬ನೇ ಚೈತ್ರ
ದಿನ– ಗುರುವಾರ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***
*The Swami Ramakrishnanandaji*
*Shri Ramakrishna Home*
*Brodies' Road*
*Mylapore , Madras*

**ವಿವರಣೆ:** ದೇವಮಾತೆಗೆ ಇಲ್ಲಿ 'ದೇವಗುರುಮಾತಾ' ಎಂದು ಬರೆಯಲಾಗಿದೆ.

### ಪತ್ರ -೩೫

ಓಂ ರಾಮಕೃಷ್ಣ ಜಯತಿ

ಶರಣಂ ೬.೪.೧೯೦೮

ಪರಮ ಶುಭಾಶೀರ್ವಾದವನ್ನು ಮೊದಲು ತಿಳಿಸಿ,

ವಿಶೇಷವೇನೆಂದರೆ,

ಪ್ರೀತಿಯ ಮಗೂ, ನಿನ್ನ ಪತ್ರ ಸಿಕ್ಕಿ ನಾನು ತುಂಬಾ ಆನಂದಿತಳಾದೆ. ಹಾಗೂ, ಮಠಕ್ಕೆ ತೆರಿಗೆ ವಿನಾಯತಿ ಆಗಿದೆ ಎಂದು ಬರೆದಿರುವೆ. ಕಂದಾಯ ಪತ್ರಗಳು ಬೇಕಾಗಿಲ್ಲ— ಅದು ಶ್ರೀಶ್ರೀ ಠಾಕೂರರ ಕೃಪೆಯಿಂದ ಮಾತ್ರವೇ ಆಗಿರುವುದು. ಏನಾದರಾಗಲಿ ನಾನು ಇದನ್ನು ಕೇಳಿ ಸಂತುಷ್ಟಳಾದೆ. ರುದ್ರಚೈತನ್ಯನಿಗೆ ಹಾಗೂ ವೈರಾಗ್ಯಾನಂದನಿಗೆ ನನ್ನ ಆಶೀರ್ವಾದ ತಿಳಿಸು. ನಿನಗೂ ನನ್ನ ಆಶೀರ್ವಾದ ಮತ್ತು ಬೇರೆ ಬೇರೆ ಭಕ್ತರಿಗೂ ಅದನ್ನು ತಿಳಿಸು. ನಾನು ಸದ್ಯ ಚೆನ್ನಾಗಿದ್ದೇನೆ. ಮನೆಯವರೆಲ್ಲರೂ ಒಂದು ರೀತಿ ಚೆನ್ನಾಗಿದ್ದಾರೆ.

ಇತಿ ವರ್ಷ ೧೩೧೪, ತಾ– ೨೪ ಚೈತ್ರ
ಸೋಮವಾರ
ನಿನ್ನ ಮಾತಾದೇವಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***
*The Swami Ramakrishnanandaji*
*Sri Ramakrishna Home*
*Brodies' Road*
*Mylapore, Madras*

**ಪತ್ರ – ೩೬**

ಶ್ರೀ ಶ್ರೀ ದುರ್ಗಾಮಾತೆಯ ಕೃಪೆ

ತಾ– ೨೨ ವೈಶಾಖ ೭.೫.೧೯೦೮

ಸುರಕ್ಷಿತವಾಗಿರು —

ಪ್ರೀತಿಯ ಮಗೂ, ನಿನ್ನ ಪತ್ರವು ಸಿಕ್ಕಿ ಎಲ್ಲವನ್ನೂ ತಿಳಿದುಕೊಂಡೆ. ಇಲ್ಲಿಯೂ ಅತ್ಯಂತ ಸೆಖೆ ಶುರುವಾಗಿದೆ. ಮಳೆ ದೇವತೆ ಬಂದಿಲ್ಲ. ನಾನು ಚೆನ್ನಾಗಿದ್ದೇನೆ. ಮನೆಯವರೆಲ್ಲರೂ ಚೆನ್ನಾಗಿದ್ದಾರೆ. ನಿಮ್ಮೆಲ್ಲರ ಯೋಗಕ್ಷೇಮದ ಬಗ್ಗೆ ಯಾವಾಗಲೂ ಬರೆಯುತ್ತಿರು. ಮತ್ತು ನನ್ನ ಆಶೀರ್ವಾದ ತೆಗೆದುಕೋ.

ಇತಿ, ಜಯರಾಂಬಾಟಿ
ಪೋಸ್ಟ್ : ಆನೂರ್, ಹೂಗ್ಲಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***
*ಶ್ರೀಮಾನ್ ಯತೀಶ್ ಚಂದ್ರ ಸೇನ್‌ಗುಪ್ತ*
*ಜಾತೀಯ ಭಂಡಾರ, ಬರಿಸಾಲ್*
*Barisal*

**ಪತ್ರ ೩೭**

ಶ್ರೀ ಶ್ರೀ ದುರ್ಗೆಯ ಕೃಪೆ

೨೮. ೮.೧೯೦೮

ಚಿರಂಜೀವಿಗೆ,

ಪ್ರೀತಿಯ ಮಗು, ಈಗತಾನೇ ನಿನ್ನ ಪಾರ್ಸೆಲ್—೨ ಜೋಡಿ ಸೀರೆ ಮತ್ತು ೮ ಪೋಸ್ಟ್ ಕಾರ್ಡುಗಳು ಸಿಕ್ಕಿದವು. ಸೀರೆಯನ್ನು ನಾಳೆಯೇ ಉಡುತ್ತೇನೆ. ಕೋಲ್ಕತ್ತೆಗೆ ಹೋಗು. ಈಗ ಹೊಸಮನೆ. ಮನೆ ಸ್ವಲ್ಪ ಒಣಗಿದ ಮೇಲೆ, ಎಂದರೆ ಜಗದ್ಧಾತ್ರಿಯ ಪೂಜೆಯ ನಂತರ ಏನಾಗುವುದೋ ಬರೆದು ತಿಳಿಸು. ಉಳಿದಂತೆ ಇಲ್ಲಿ ಎಲ್ಲರೂ ಕ್ಷೇಮ. ನಿಮ್ಮೆಲ್ಲರ ಯೋಗಕ್ಷೇಮವನ್ನು ಬರೆದು ತಿಳಿಸು.

ಇತಿ, ೧೧ ಭಾದ್ರಪದ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***
*ಪರಮ ಪ್ರೀತಿಯ*
*ಶ್ರೀಮಾನ್ ನಿರ್ಮಲಚಂದ್ರ ದಾಸ್ ಘೋಷ್*
*ಕಲ್ಕತ್ತಾ ಗ್ರೇ ಸ್ಟ್ರೀಟ್, ನಂ.೧೦೭,*
*ಶ್ರೀಕುಮಾರ ಕುಮಾರ ಕೃಷ್ಣ ಬಹಾದುರನ ಮನೆ*
*Calcutta*

**ಪತ್ರ – ೩೮**

ಶ್ರೀ ಶ್ರೀ ದುರ್ಗಾ

೨೮. ೯.೧೯೦೮
ಜಯರಾಂಬಾಟಿ, ೧೩೧೫ನೇ ವರ್ಷ

ಪರಮ ಶುಭಾಶೀರ್ವಾದ, ವಿಶೇಷವೇನೆಂದರೆ —

ಪ್ರೀತಿಯ ಮಗೂ, ನಿನ್ನ ೮ ಪೋಸ್ಟ್ ಕಾರ್ಡ್‌ಗಳು, ಮತ್ತು ಸೀರೆಗಳು ಸಿಕ್ಕಿದವು. ಸೀರೆಗಳು ಚೆನ್ನಾಗಿವೆ. ದಿನನಿತ್ಯ ಉಡಲು ಸಾಧ್ಯವಾಗುವುದು. ಚಳಿಗಾಲಕ್ಕಂತೂ ಚೆನ್ನಾಗಿರುತ್ತದೆ. ನಾನು ಚೆನ್ನಾಗಿದ್ದೇನೆ, ಮತ್ತು ಮನೆಯವರೆಲ್ಲರೂ ಚೆನ್ನಾಗಿಯೇ ಇದ್ದಾರೆ. ನಿಮ್ಮೆಲ್ಲರ ಶಾರೀರಿಕ ಸುಸ್ಥಿತಿಯ ಬಗ್ಗೆ ಮಧ್ಯೆ ಮಧ್ಯೆ ಬರೆದು ಸಮಾಧಾನ ನೀಡು. ಉಳಿದಂತೆಲ್ಲ ಮಂಗಳ.

ಇತಿ– ೧೨ , ಅಶ್ವಿನ್
ನಿಮ್ಮೆಲ್ಲರ ತಾಯಿ

***ಪತ್ರ ಪಡೆದವರ ಹೆಸರು ಮತ್ತು ವಿಳಾಸ***
*ಪರಮ ಪ್ರೀತಿಯ*
*ಶ್ರೀಮಾನ್ ನಿರ್ಮಲಚಂದ್ರ ದಾಸ್ ಘೋಷ್*
*ಕಲ್ಕತ್ತಾ ಗ್ರೇ ಸ್ಟ್ರೀಟ್, ನಂ.೧೦೭,*
*ಶ್ರೀಕುಮಾರ ಕುಮಾರ ಕೃಷ್ಣ ಬಹಾದುರನ ಮನೆ*
*Calcutta*

ಶ್ರೀ ಮಾತೆಯವರು ಎಷ್ಟೊಂದು ಸರಳವಾಗಿದ್ದರೆಂದರೆ ತಮ್ಮ ಮನಸ್ಸಿನಲ್ಲಿರುವುದನ್ನು ಸರಳವಾಗಿ ಹೇಳುತ್ತಿದ್ದರು. ಈ ಪತ್ರದಲ್ಲಿ ಭಕ್ತನು ಕಳುಹಿಸಿರುವ ಸೀರೆಯ ಬಗ್ಗೆ ತಿಳಿಸಿದ್ದಾರೆ – ಸೀರೆಯನ್ನು ದಿನನಿತ್ಯ ಉಪಯೋಗಿಸಬಹುದು ಎಂದು. ಏಕೆಂದರೆ ಅದು ಸಾಧಾರಣ ಸೀರೆಯಾಗಿದ್ದಿರಬಹುದು. ಬೆಲೆಬಾಳುವ ಸೀರೆಯಾಗಿದ್ದರೆ ಅದನ್ನು ಎತ್ತಿಡಬೇಕು. ಹಾಗೂ ಅದು ದಪ್ಪವಾಗಿದ್ದಿರಬೇಕು, ಆದ್ದರಿಂದಲೇ ಅದು ಚಳಿಗಾಲಕ್ಕೆ ಸರಿ ಎಂದು ತಿಳಿಸಿದ್ದಾರೆ.

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ**

ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೧೪



**ಗಾ**ಡಿಯಲ್ಲಿ ಕುಳಿತು ಹೋಗುವಾಗ ಶ್ರೀಮಾತೆಯವರ ಒಂದು ಕಾಲು ಈ ಕಡೆ, ಇನ್ನೊಂದು ಕಾಲು ಆ ಕಡೆ ಜೋತು ಬೀಳ ತೊಡಗಿತು. ಗೋಲಾಪ್ ಮಾ ಬಲವಂತವಾಗಿ ಅವುಗಳನ್ನು ಎಳೆದು ಹಿಡಿದುಕೊಂಡಳು. ಮನೆ ತಲುಪಿದರು; ಇಬ್ಬರು ಅವ ರನ್ನು ಎರಡೂ ದಿಕ್ಕುಗಳಲ್ಲಿ ಹಿಡಿದುಕೊಂಡು ಗಾಡಿಯಿಂದ ಇಳಿಸಿ, ಮೇಲಂತಸ್ತಿಗೆ ಕರೆದುಕೊಂಡು ಹೋದರು. ಗೋಲಾಪ್ ಮಾ ಹಲವು ಬಾರಿ ಅವರನ್ನು ಕರೆಯತೊಡಗಿದಳು; ಆದರೆ ಉತ್ತರವಿಲ್ಲ, ಶಬ್ದವೂ ಕೇಳಿಬರಲಿಲ್ಲ. ಅವರನ್ನು ಠಾಕೂರರ (ದೇವರ) ಕೋಣೆಗೆ ಕರೆದುಕೊಂಡು ಹೋಗಿ ಶ್ರೀರಾಮಕೃಷ್ಣರ ಎದುರಿಗೆ ನಿಲ್ಲಿಸಿದರು. ಅಲ್ಲಿ ಅವರು ಸ್ಥಿರವಾಗಿ ನಿಂತರು – ಕಣ್ಣಿನ ರೆಪ್ಪೆ ಅಲುಗುತ್ತಿರಲಿಲ್ಲ! ಗೋಲಾಪ್ ಮಾ ಭಾಗ್ಯವಶಾತ್ ಹಿಂದೆ ವೃಂದಾವನದಲ್ಲಿ ಒಂದು ಸಲ ಇಂತಹದೇ ಅವಸ್ಥೆಯನ್ನು ನೋಡಿ ದ್ದಳು. ಅವಳು ಹೇಳತೊಡಗಿದಳು, ''ವೃಂದಾವನದಲ್ಲಿ ಶ್ರೀಮಾ ತೆಗೆ ಭಾವ ಬಂದದ್ದನ್ನು ನೋಡಿದ್ದೆ. ಇಂದೂ ಅದನ್ನೇ ನೋಡಿದೆ.'' ಹಿಂದೆ ನಾನು ಈ ರೀತಿಯ ಅನುಭವವನ್ನು ಕಂಡಿರಲಿಲ್ಲ. ಇಂದು ಮೊದಲ ಬಾರಿ ಅದನ್ನು ಕಂಡ ನಾನೇ ಧನ್ಯ ಎಂದು ಭಾವಿಸಿದೆ.

ಗೋಲಾಪ್ ಮಾ ಮರಳಿ ಮರಳಿ ಶ್ರೀಮಾತೆಯವರನ್ನು ಕರೆದರೂ ಪ್ರಜ್ಞೆ ಬಾರದೆ ಹೋದಾಗ, ಶ್ರೀಮಾತೆ ಒಂದು ದಿನ ಉಪದೇಶದ ನಡುವೆ ಹೇಳಿದ ಮಾತು ನೆನಪಿಗೆ ಬಂತು. ''ತಾಯಿ ಅದೆಷ್ಟೇ ಕೆಲಸದಲ್ಲಿ ಮುಳುಗಿರಲಿ, ಮಕ್ಕಳು ಕಿವಿಯ ಬಳಿ ಬಂದು ಕರೆದರೆ ಕೂಡಲೇ ಬಂದುಬಿಡುತ್ತಾಳೆ'' ಎಂದು ಅವರು ಹೇಳಿದ್ದರು. ಅದನ್ನು ಪರೀಕ್ಷೆ ಮಾಡುವ ಸಲುವಾಗಿ, ಅವರು ಹೇಳಿದಂತೆ ಮಾಡಿ ನೋಡಿದೆ.

ಅವರ ಕಿವಿಯ ಬಳಿ ಹೋಗಿ ''ಅಮ್ಮಾ, ಅಮ್ಮಾ'' ಎಂದು ಕರೆಯತೊಡಗಿದೆ. ಆಗ ಅವರ ದೇಹ ಕಂಪಿಸತೊಡಗಿತು. ಅನಂ ತರ ಸ್ಪಷ್ಟವಾದ ಉಚ್ಚಾರಣೆಯೊಂದಿಗೆ, ''ಯಾಕೆ, ಮಗೂ!'' ಎಂದರು. ನಾನು, ''ಹಸಿವಾಗುತ್ತದಮ್ಮಾ, ಠಾಕೂರರಿಗೆ ನೈವೇದ್ಯ ಮಾಡಿ'' ಎಂದೆ. ಅನಂತರ ಅವರಲ್ಲಿ ಯಾವುದೇ ಅಸಾಧಾರಣತೆ ಉಳಿಯಲಿಲ್ಲ. ಒಮ್ಮೆಲೆ ಅವರು ಬಾಹ್ಯ ಸಹಜ ಅವಸ್ಥೆಗೆ ಮರಳಿ ದರು. ನೈವೇದ್ಯ ತಯಾರಾಗಿ ಬಂತು. ಕೈಜೋಡಿಸಿ ಅವರು ಠಾಕೂ ರರಿಗೆ ನೈವೇದ್ಯ ಮಾಡಿದರು. ಶರತ್ ಮಹಾರಾಜರು ಕಿರಣ ಬಾಬು ವಿನ ಮನೆಯಿಂದ ಮರಳಿ ಬಂದು, ಎಲ್ಲವನ್ನೂ ಕೇಳಿ, ''ಸರಿಯಾಗಿ ಮಾಡಿದೆ. ಇದನ್ನು ನಾವೂ ನೆನಪಿನಲ್ಲಿಡಬೇಕು'' ಎಂದರು.

ಠಾಕೂರರ ಶಿಷ್ಯರಾದ ಲಾಟು ಮಹಾರಾಜರನ್ನು(ಸ್ವಾಮಿ ಅದ್ಭುತಾನಂದರು) ನೋಡುತ್ತಿದ್ದೆವು, ಅವರು ಹೆಚ್ಚಾಗಿ ಶ್ರೀಮಾತೆ ಯವರ ಬಳಿಗೆ ಬರುತ್ತಿರಲಿಲ್ಲ. ಆದರೆ ಪ್ರತಿವರ್ಷ ದುರ್ಗಾ ಪೂಜೆಯ ಸಮಯದಲ್ಲಿ ಶ್ರೀಮಾತೆ ಕಲ್ಕತ್ತೆಯಲ್ಲಿದ್ದರೆ, ಒಂದು ಬಾರಿಯಂತೂ ಖಂಡಿತ ಅವರನ್ನು ನೋಡಲು ಬರುತ್ತಿದ್ದರು. ಅವರನ್ನು ಕಂಡಾಗ ಶ್ರೀಮಾತೆಗೆ ತುಂಬಾ ಆನಂದವಾಗುತ್ತಿತ್ತು. ತಮ್ಮ ಕೋಣೆಯಲ್ಲೇ ಕುಳ್ಳಿರಿಸಿ ಅವರಿಗೆ ಪ್ರಸಾದ ತಿನ್ನಲು ಕೊಡು ತ್ತಿದ್ದರು; ತುಂಬಾ ಮಾತನಾಡುತ್ತಿದ್ದರು ಹಾಗೂ ಒಂದು ವಸ್ತ್ರ ವನ್ನು ನೀಡುತ್ತಿದ್ದರು. ಲಾಟು ಮಹಾರಾಜರು ವಸ್ತ್ರವನ್ನು ತಲೆಗೆ ಪಗಡಿಯಂತೆ ಸುತ್ತಿಕೊಂಡು ಹೋಗುತ್ತಿದ್ದರು. ಪ್ರಸಾದ ಸ್ವೀಕರಿಸು ತ್ತಿರಬೇಕಾದರೆ ಅವರ ಕಣ್ಣುಗಳಿಂದ ನೀರು ಧಾರಾಕಾರ ಸುರಿಯು ತ್ತಿತ್ತು. ಒಂದೊಂದು ಸಲ ಪ್ರಸಾದ, ವಸ್ತ್ರ ಇವುಗಳನ್ನು ಎತ್ತಿ ಕೊಂಡು, ಅಲ್ಲಿಂದ ಓಡಿಹೋಗುತ್ತಿದ್ದರು. ಶ್ರೀಮಾತೆ ಆಗ ಜೋರಾಗಿ ನಗುತ್ತಿದ್ದರು.

ಲಾಟು ಮಹಾರಾಜರ ಬಗ್ಗೆ ಶ್ರೀಮಾತೆ ಹೀಗೆನ್ನುತ್ತಿದ್ದುದನ್ನು ಕೇಳಿದ್ದೆ: ''ಲಾಟು ನಹಬತ್‌ಗೆ ಬಂದು ಚಪಾತಿ ಮಾಡಿಕೊಡುತ್ತಿದ್ದ,



**ಲಾಟು ಮಹಾರಾಜ್ (ಸ್ವಾಮಿ ಅದ್ಭುತಾನಂದರು)**

ಮೈದಾ ನಾದುತ್ತಿದ್ದ. ಎಷ್ಟೊಂದು ಪಾತ್ರೆ ತೊಳೆಯುತ್ತಿದ್ದ, ನೀರು ತರುತ್ತಿದ್ದ. ಆಹಾ, ಲಾಟುವಿನಂತೆ ಏಕನಿಷ್ಠೆಯ ಭಕ್ತ ಇನ್ನೆಲ್ಲಿ?''

ಒಂದು ಸಲ ಒಬ್ಬ ವಿದೇಶೀ ಯುವಕ ಹಾಗೂ ಒಬ್ಬಾಕೆ ವಿದೇಶೀ ಯುವತಿ (ಇಬ್ಬರೂ ಅವಿವಾಹಿತರು) ಶ್ರೀಮಾತೆಯವರ ದರ್ಶನ ಪಡೆಯಲು ಬರುವುದಾಗಿ ತಿಳಿದು ಬಂತು. ನಮಗೆ ಅವರ ಪರಿಚಯವಿದ್ದಿರಲಿಲ್ಲ. ಅವರನ್ನು ಮೇಲಂತಸ್ತಿಗೆ ಕರೆದು ಕೊಂಡು ಹೋದೆ. ಅವರು ಶ್ರೀಮಾತೆಗೆ ಪ್ರಣಾಮ ಮಾಡಿ, ಇಳಿದು ಬಂದು 'ಉದ್ಬೋಧನ ಕಾರ್ಯಾಲಯ'ದಲ್ಲಿ ಸ್ವಲ್ಪ ಹೊತ್ತು ಕುಳಿತರು, ಅನಂತರ ತಮ್ಮೊಳಗೆ ಜೋರಾಗಿ ವಾಗ್ವಾದ ನಡೆಸಿದರು. ಕೊನೆಗೆ ಕೋಪಗೊಳ್ಳುತ್ತ ಅವರು ಹೊರಟು ಹೋದರು. ಅಂದು ಬೇರೇನೋ ಕೆಲಸಕ್ಕಾಗಿ ಮೇಲಂತಸ್ತಿಗೆ ಹೋಗಿದ್ದಾಗ ಶ್ರೀಮಾತೆ ಕೇಳಿದರು, ''ಆ ವಿದೇಶೀ ಗಂಡಸು, ಹೆಂಗಸು ಪತಿ-ಪತ್ನಿಯರೆ?'' ನಾನೆಂದೆ, ''ಇಲ್ಲ , ಅವರಿಬ್ಬರೂ ಅವಿವಾಹಿತರು.'' ಆಗ ಶ್ರೀಮಾತೆ ಹೇಳಿದರು, ''ಆದರೆ ನನಗ ನ್ನಿಸಿತು ಅವರು ಹಾಗೆ - ಅಂತ.'' ಆಗ ನಾನೆಂದೆ, ''ಅಮ್ಮಾ, ಅವರ ನಡುವೆ ಜಗಳ ನಡೆಯುತ್ತಿದ್ದನ್ನು ಕೇಳಿಸಿಕೊಂಡೆ.''

ಈ ಮನೆಯಲ್ಲಿ ಶ್ರೀಮಾತೆಯವರ ಮೂರು ಫೋಟೋ ಗಳನ್ನು ವಿ.ದತ್ತ ಎಂಬ ಫೋಟೋಗ್ರಾಫರ್ ಮೂಲಕ ತೆಗೆಯ ಲಾಯಿತು.

ಇಲ್ಲಿಗೆ ಶ್ರೀಮಾತೆಯವರಿಂದ ದೀಕ್ಷೆ ಪಡೆಯಲು ಅನೇಕ ಮಂದಿ ಸ್ತ್ರೀಯರು ಹಾಗೂ ಪುರುಷರು ಬಂದು ಸೇರುತ್ತಿದ್ದರು. ಒಂದು ದಿನ ಶ್ರೀ ಅರವಿಂದರು ಶ್ರೀಮಾತೆಯವರಿಗೆ ಪ್ರಣಾಮ ಮಾಡಲು ಬಂದಿದ್ದರು.

ನಳಿನಿಯ ಗಂಡ ಪ್ರಮಥನನ್ನು ಚಿಕಿತ್ಸೆ ಮಾಡಿ ಆರೋಗ್ಯ ವಂತನನ್ನಾಗಿ ಮಾಡಿದ ಡಾಕ್ಟರ್, ಶ್ರೀಮಾತೆಯವರ ಆದೇಶದ ಪ್ರಕಾರ ಎರಡನೇ ಬಾರಿ ಮದುವೆಯಾಗಿದ್ದ. ಅವನ ಎರಡನೇ ಪತ್ನಿ ಶ್ರೀಮಾತೆಯವರ ಶಿಷ್ಯೆಯಾಗಿದ್ದಳು. ಆಕೆ ಶ್ರೀಮಾತೆಯವ ರನ್ನು ಕೇಳಿ, ಅವರ ಜೀವನದ ವಿಶೇಷ ವಿವರಗಳನ್ನು ಸಂಗ್ರಹಿಸಿ ದ್ದಳು. ಅವಳ ಪತಿಯೊಂದಿಗಿನ ಸ್ನೇಹ ಹಾಗೂ ಸಹೋದರ ಭಾವದ ಕಾರಣದಿಂದ ಆ ವಿವರಗಳು ನನಗೆ ಲಭಿಸಿದ್ದವು. ಅವು ಗಳನ್ನು ಆ ಸ್ನೇಹಿತನ ಮಾತಿನಲ್ಲೇ (ಅಂದರೆ ಅವನು ಯಾವ ರೀತಿ ಶ್ರೀಮಾತೆಯವರ ವಿಷಯಗಳನ್ನು ಹೇಳಿದ್ದನೋ, ಆ ರೀತಿ ಯಲ್ಲಿ) ಹೇಳಲು ನಾನು ಯತ್ನಿಸುತ್ತೇನೆ:

''ದೇವಶರೀರವೆಂಬುದು ನಮ್ಮಂತೆ, ಸಾಧಾರಣ ವ್ಯಕ್ತಿಗಳ ಹಾಗೆ ಇರುವುದಿಲ್ಲ. ಅದಕ್ಕೆ ಎಂಥ ವಿಶೇಷತೆ ಇದೆಯೆಂದರೆ, ಅದನ್ನು ಬೇರೆಲ್ಲಿ ಹುಡುಕಿದರೂ ಸಿಗಲಾರದು; ಅದು ಅಸಂ ಭವವೆಂದೂ ಹೇಳಬಹುದು. ಠಾಕೂರ್ ಸ್ವಾಮೀಜಿಗೆ ಹೀಗೆ ಹೇಳಿದ್ದರಂತೆ, 'ಅಪ್ಪಾ, ನನ್ನ ಹಾಗೆ ನಿನ್ನ ಮೂಲಕವೂ ಸ್ತ್ರೀ ಸಂಭೋಗ ನಡೆಯದು.' ''

ಶ್ರೀಮಾತೆ ತಮ್ಮ ಶಿಷ್ಯಂದಿರಿಗೆ ಕೆಲವೊಮ್ಮೆ ಹೇಳಿದ್ದನ್ನು ಕೇಳಿದ್ದೇನೆ, ''ಠಾಕೂರರನ್ನು ನೋಡಲಾಗಲಿಲ್ಲವೆ? ನಾನು ಹೇಳು ತ್ತೇನೆ, ಖಂಡಿತ ನೋಡುವೆ. ನಿನ್ನನ್ನು ಹಿಡಿದುಕೊಂಡಿರುವವರು ಅಂತಿಂಥ ವ್ಯಕ್ತಿಯೆ?''

ನಾವು ಕೆಲವು ಮಂದಿ ಶ್ರೀಮಾತೆಯವರ ಶಿಷ್ಯಂದಿರು ಒಂದೆಡೆ ಸೇರಿ ನಮ್ಮ ನಮ್ಮ ಅನುಭವಗಳನ್ನು ಕುರಿತು ವಿಚಾರ ವಿನಿಮಯ ಮಾಡುತ್ತಾ, ಒಂದು ವಿಷಯದಲ್ಲಿ ಸಹಮತ ಹೊಂದಿ ದ್ದೆವು. ಅದೇನೆಂದರೆ, ತಮ್ಮ ಯಾವ ಶಿಷ್ಯನಿಗೆ ಯಾವ ಆಹಾರ ಇಷ್ಟವೋ ಅದನ್ನು ಶ್ರೀಮಾತೆಯವರು - ಈ ಹಿಂದೆ ತಿಳಿಯದೆ - ಕೇಳದೆ ಇದ್ದರೂ ಕೂಡ, ಆತನಿಗೆ ನೀಡುತ್ತಿದ್ದರು.

ಶ್ರೀಮಾತೆ ನಮಗೆ ಹೇಳಿದ್ದರು, ಅವರಿಗೆ ಶ್ರೀರಾಮಕೃಷ್ಣರು ಕಲಿಸಿದ್ದರಂತೆ, ಯಾವ ಆಧಾರಕ್ಕೆ (ಯಾರ ಯೋಗ್ಯತೆಗೆ) ಯಾವ ಮಂತ್ರ ಸೂಕ್ತ, ಹಾಗೂ ಯಾವ ಮಂತ್ರಕ್ಕೆ ಯಾವುದು ಬೀಜ — ಇತ್ಯಾದಿ. ಮುಂದೆ ನೂರಾರು, ಸಾವಿರಾರು ಮಂದಿ ಜನರು ಅವರ ಬಳಿಗೆ ಬಂದಾಗ, ಅವರ ಆಧ್ಯಾತ್ಮಿಕ ಜೀವನಕ್ಕೆ ಅದರಿಂದ ಲಾಭವುಂಟಾಗುವುದು ಎಂದು ಆ ರೀತಿ ಕಲಿಸಿದ್ದರಂತೆ.

ಶ್ರೀಮಾತೆ ಇನ್ನೊಮ್ಮೆ ಜಯರಾಮಬಾಟಿಗೆ ಹೋದರು. ಅಲ್ಲಿ ಶ್ರೀಮಾತೆಯವರ ಮನೆಯ ಬಲಭಾಗದಲ್ಲಿ ಒಂದು ಜಮೀನು ಇತ್ತು, ಅದು ಅಲ್ಲಿಯವರೆಗೂ ಧಾನ್ಯ ಒಟ್ಟುವ ಸ್ಥಳ ವಾಗಿ ಬಳಕೆಯಾಗುತ್ತಿತ್ತು. ಅದಕ್ಕೆ 'ಖಾಮಾರ್' ಎನ್ನುತ್ತಿದ್ದರು. ಅಲ್ಲಿ ಧಾನ್ಯವನ್ನು ಒಟ್ಟುತ್ತಿದ್ದರು. ಈ ಬಾರಿ ಜಯರಾಮಬಾಟಿಗೆ

ಹೋದಾಗ ಅಲ್ಲಿ 'ಖಾಮಾರ್' ಇರಲಿಲ್ಲ; ಅದರಲ್ಲಿ ಕಾಳೀಮಾವನ ಹೊಸ ಮನೆ ನಿರ್ಮಾಣವಾಗಿತ್ತು. ಹಳೆಯ ಮನೆಯ ಚಂಡೀ ಮಂಟಪ[೧] ಹಾಗೂ ಪಕ್ಕದ ಮನೆ – ಅಲ್ಲಿ ನಾನು ಹಾಗೂ ಇತರ ಭಕ್ತರು ತಂಗುತ್ತಿದ್ದೆವು. ಅದು ಈಗ ಖಾಮಾರ್ ಆಗಿ ಬಳಕೆ ಯಾಗುತ್ತಿತ್ತು. ಈಗ ನಾನು ಕಾಳೀಮಾವನ ಮನೆಯಲ್ಲೇ ಇರಬೇಕಾಗಿ ಬಂತು. ಕಾಳೀಮಾವ ಮಡಾಗೇಡ್‌ನಿಂದ ತನ್ನ ಕುಟುಂಬವನ್ನು ಕರೆದು ಕೊಂಡು ಬಂದು, ಆ ಮನೆಯಲ್ಲೇ ವಾಸ ಮಾಡುತ್ತಿದ್ದ.

ಶ್ರೀಮಾತೆಯವರಿಗೆ ಮೂರು ನಾಲ್ಕು ಜನ ಗೃಹಸ್ಥ ಹಾಗೂ ಸಂನ್ಯಾಸೀ ಅಂತರಂಗ ಭಕ್ತರಿದ್ದರು. ಅವರ ಮೂಲಕ ಶ್ರೀಮಾತೆ ತಮ್ಮ ಯಾವ ಕೆಲಸಗಳನ್ನು ಮಾಡಿಸುತ್ತಿದ್ದರೋ, ಅವುಗಳನ್ನು ಬೇರೆ ಯಾರಿಗೂ ಹೇಳಲು ಇಚ್ಛಿಸುತ್ತಿರಲಿಲ್ಲ. ಅಲ್ಲಿ ವಾಸ ಮಾಡು ತ್ತಿದ್ದ ಒಬ್ಬ ಅಂತರಂಗ ಭಕ್ತನ ಕಥೆಯನ್ನೀಗ ಹೇಳುತ್ತೇನೆ. ಈ ಭಕ್ತ ಠಾಕೂರರ ಸಣ್ಣ ಹಾಗೂ ದೊಡ್ಡ ಗಾತ್ರದ, ನಾನಾ ಬಗೆಯ ಚಿತ್ರ ಗಳನ್ನು ಮಾಡಿಸಿ ಮಾರಾಟ ಮಾಡುತ್ತಿದ್ದ. ಹಾಗೆ ಮಾರಿದ ಹಣ ವನ್ನು ಶ್ರೀಮಾತೆಯವರ ಆದೇಶದಂತೆ ಅವರ ಕೆಲಸಕ್ಕಾಗಿ ವಿನಿ ಯೋಗಿಸುತ್ತಿದ್ದ.

ಶ್ರೀಮಾತೆಯವರ ಕೈಯಲ್ಲಿ ಮೊದಲಿನಿಂದಲೇ 'ಹೋಗ್ಲಾ ಪಾಕಾ'[೨] ಕುಸುರಿಯ ಎರಡು ಚಿನ್ನದ ಬಳೆಗಳು ಇರುತ್ತಿದ್ದವು (ಅವರ ಭಾವಚಿತ್ರಗಳಲ್ಲಿ ಕಾಣುವಂತೆ); ಕಡೇಪಕ್ಷ ನಾವು ಅವರ ಬಳಿಗೆ ಬರುವ ವೇಳೆಗೆ ಅದನ್ನು ಕಂಡಿದ್ದೆವು. ಆ ಬಳೆ ಮಾಸಿ ಹೋದಾಗ ಅದನ್ನು ಒಡೆದು, ಹೊಸ ಕುಸುರಿಯ ದಪ್ಪದ ಬಳೆ ಗಳನ್ನು ಎರಕ ಹಾಕಿಸಲಾಯಿತು. ಹೊಸ ಬಳೆ ಲೋಹದಂತೆ ಕಂಡುಬಂದು, 'ಈ ಬಳೆ ಚೆನ್ನಾಗಿದೆ' ಎಂದು ಶ್ರೀಮಾತೆ ಬಾಯಿಮಾತಿಗೆ ಹೇಳಿದ್ದರೂ, ನಿಜವಾಗಿ ಅವರಿಗೆ ಹಿಡಿಸಿರಲಿಲ್ಲ. ನಿಜವಾದ ಅವರ ಅಭಿಪ್ರಾಯವನ್ನು ಅವರು ಮೇಲೆ ಹೇಳಿದ ಭಕ್ತನಿಗೆ ತಿಳಿಸಿದಾಗ ಅವನು ಹೇಳಿದ: ''ನಿಮಗೆ 'ಹೋಗ್ಲಾ ಪಾಕಾ' ಬಳೆ ಇಷ್ಟವೆಂದಾದರೆ, ಮೂರು ದಿನಗಳ ಒಳಗಾಗಿ ಅದನ್ನು ನೀವು ಪಡೆಯುವಿರಿ.'' ಮೂರು ದಿನಗಳಲ್ಲಿ ಅದೇ ರೀತಿಯ ಬಳೆ ಬಂತು, ಆಗ ಶ್ರೀಮಾತೆ ಚಿಕ್ಕ ಹುಡುಗಿಯಂತೆ ಸಂತೋಷಪಟ್ಟರು. ಒಂದು ಬಾರಿ ಅದನ್ನು ತೊಟ್ಟುಕೊಂಡರು. ಆದರೆ ಎಲ್ಲರ ಎದುರಿಗೆ ಅದನ್ನು ತೊಡಲಾಗಲಿಲ್ಲ. ಆದರೆ ನಮಗೆ ವಿಶೇಷವಾಗಿ ತಿಳಿದುಬಂದದ್ದೇನೆಂದರೆ, ಮುಂದೆ ಅವರು ಆ ಬಳೆಯನ್ನೇ ತೊಟ್ಟುಕೊಂಡರು; ದಪ್ಪನೆಯ ಬಳೆಯನ್ನು ತೊಡಲಿಲ್ಲ. ಭಕ್ತ ಹೊರಟೇ ಹೋದ; ಆದರೆ ಶ್ರೀಮಾತೆ ಅವನ ನೆನಪಿಗಾಗಿ ಆ ಬಳೆಗಳನ್ನು ಯಾವಾಗಲೂ ಧರಿಸುತ್ತಿದ್ದರು...

ಈ ಬಾರಿ ಶ್ರೀಮಾತೆ ಕಲ್ಕತ್ತೆಗೆ ಬಂದಾಗ ಅವರ ದೇಹದಲ್ಲಿ ಸೀತಾಳೆ ಸಿಡುಬು (small pox) ಕಾಣಿಸಿಕೊಂಡಿತು. ಬಾಗ್ ಬಜಾರಿನ ಬೀದಿಯಲ್ಲಿದ್ದ ಶೀತಲಾದೇವಿಯ[೩] ಪೂಜಾರಿಯೊಬ್ಬ ನಿಂದ ಅವರು ಚಿಕಿತ್ಸೆ ಪಡೆದರು. ಆ ಬ್ರಾಹ್ಮಣ ಪ್ರತಿದಿನವೂ ಬರುತ್ತಿದ್ದ. ಅವನು ಹೋಗುವಾಗ ಶ್ರೀಮಾತೆ ಕೊರಳಿಗೆ ಸೀರೆಯ ತುದಿಯನ್ನು ಸುತ್ತಿ ಅವನ ಪಾದಧೂಳಿಯನ್ನು ಸ್ವೀಕರಿಸುತ್ತಿದ್ದರು. ಶ್ರೀಮಾತೆ ಇಂತಹ ಚರಿತ್ರಹೀನರಾದ ಬ್ರಾಹ್ಮಣರ ಪಾದಧೂಳಿ ಯನ್ನು ಸ್ವೀಕರಿಸುತ್ತಿದ್ದುದನ್ನು ಕಂಡು ನಮಗೆ ತುಂಬಾ ಸಂಕಟ ವಾಗುತ್ತಿತ್ತು. ಒಂದು ದಿನ ಸುಮ್ಮನಿರಲಾರದೆ ನಾನು ಶ್ರೀಮಾತೆ ಯವರಿಗೆ ಹೀಗೆ ಮಾಡಬಾರದೆಂದು ಹೇಳಿದೆ. ಅದಕ್ಕೆ ಅವರು, ''ಏನು ಗೊತ್ತೆ, ಮಗೂ – ಸಾವಿರ ಬಗೆಯ ದೋಷಗಳೇ ಇರಲಿ, ಬ್ರಾಹ್ಮಣ ಹಾಗೂ ವೈಷ್ಣವರ ಗೌರವವನ್ನು ಸಲ್ಲಿಸಿ ಬಿಡುವುದೇ ಒಳ್ಳೆಯದು. ಠಾಕೂರ್ ಯಾವುದನ್ನೂ ಧ್ವಂಸಗೊಳಿಸಲು ಬರ ಲಿಲ್ಲ'' ಎಂದು ಉತ್ತರಿಸಿದರು.

ಶ್ರೀಮಾತೆಗೆ ಈ ರೋಗ ಬಂದಿದ್ದಾಗ ಒಂದು ಕುತೂಹಲಕರ ವಾದ ಘಟನೆ ನಡೆಯಿತು. ಆಗ ರೋಗ ವಾಸಿಯಾಗಿತ್ತು ನಿಜ. ಆದರೆ ಇನ್ನೂ ಪಥ್ಯ ಮುಗಿದಿರಲಿಲ್ಲ. ಹೀಗಿದ್ದಾಗ ಒಂದು ದಿನ ಅವರಿಗೆ ನುಗ್ಗೆಕಾಯಿ ಪಲ್ಯ ತಿನ್ನುವ ಇಚ್ಛೆಯಾಯಿತು. ಅದನ್ನು ಅವರು ನಮ್ಮ ಮುಂದೆ ವ್ಯಕ್ತಪಡಿಸಿದರು. ''ಈಗಲೇ ನಾನು ತರುತ್ತೇನೆ'' ಎಂದು ಅದನ್ನು ತರಲು ನಾನು ಹೊರಟಾಗ ಅವರು, ''ಹೇಗೆ ತರುತ್ತೀಯಾ? ಯಾರಿಗೂ ಅದು ಗೊತ್ತಾಗ ದಿದ್ದೀತೆ?'' ಎಂದರು. ''ಆ ಹೆದರಿಕೆಯೇನೂ ಇಲ್ಲ. ಗೋಪೀ ನಾಥನಿಂದ (ಅಡಿಗೆ ಭಟ್ಟನ ಹೆಸರು) ಅಡಗಿಸಿಕೊಂಡು ತರುತ್ತೇನೆ. ಅವನು ಯಾರಿಗೂ ಹೇಳಲಾರ'' ಎಂದು ಹೇಳಿ ನಾನು ಹೊರಟು ಹೋದೆ. ಒಂದು ಸಾಲಪತ್ರೆಯ[೪] ಮೇಲೆ ನುಗ್ಗೆಕಾಯಿಗಳನ್ನು ಸುತ್ತಿ ಕ್ಷಣಾರ್ಧದಲ್ಲೇ ಅದನ್ನು ಶ್ರೀಮಾತೆಯವರ ಬಳಿಗೆ ತಂದೆ. ಅವರು ಆನಂದದಿಂದ ಅದನ್ನು ಜಗಿಯತೊಡಗಿ, ಅದರ ಜೊಂಡನ್ನು ಸಾಲಪತ್ರೆಯ ಮೇಲೆ ಇಡತೊಡಗಿದರು. ಎಲ್ಲ ವನ್ನೂ ತಿಂದಾದ ಮೇಲೆ ಉಳಿದಿರುವ ತುಣುಕುಗಳನ್ನು ಜಗಿಯು ತ್ತಿದ್ದರು. ಅಷ್ಟರಲ್ಲಿ ಹಠಾತ್ತನೆ ಗೋಲಾಪ್ ಮಾ ಅಲ್ಲಿಗೆ ಬಂದಳು. ಅವಳನ್ನು ನೋಡಿದ ನಾನು ಅವಳ ಕಡೆಗೆ ಬೆನ್ನು ತೋರಿಸಿ ಮರೆ ಮಾಡಿ, ಒಂದು ಕೈಯಲ್ಲಿ ಜೊಂಡನ್ನು ಬಾಯಿಗೆ ಹಾಕಿ ನುಂಗಿ ಬಿಟ್ಟೆ; ಇನ್ನೊಂದು ಕೈಯಿಂದ ಸಾಲಪತ್ರೆಯನ್ನು ಅಡಗಿಸಿಟ್ಟೆ.

---

೧ ದುರ್ಗಾಪೂಜೆಯ ವೇಳೆಗೆ 'ದುರ್ಗಾಸಪ್ತಶತೀ' (ಅದಕ್ಕೆ ಬಂಗಾಳದಲ್ಲಿ 'ಚಂಡೀ' ಎನ್ನುತ್ತಾರೆ) ಪಾರಾಯಣ ಮಾಡುವ ಮಂಟಪವೇ 'ಚಂಡೀ ಮಂಟಪ'. ಅಲ್ಲಿ ದುರ್ಗಾಸಪ್ತಶತೀ ಪಾರಾಯಣ, ಚಂಡೀ ಹೋಮ ನಡೆಯುವುದು. *(–ಅನು.)*

೨ ನೀರಿನಲ್ಲಿ ಬೆಳೆಯುವ ಆನೆಜೊಂಡು (bulrush) ಹುಲ್ಲಿಗೆ 'ಹೋಗ್ಲಾ' ಎನ್ನುತ್ತಾರೆ. ಹೆಚ್ಚಾಗಿ ಗುಡಿಸಲು ನಿರ್ಮಾಣಕ್ಕೆ ಈ ಹುಲ್ಲನ್ನು ಬಳಸಲಾಗು ತ್ತದೆ. ಈ ಹುಲ್ಲಿನಂತೆ ಕುಸುರಿಯಿರುವ ಬಳೆಗೆ ಬಂಗಾಳಿಯಲ್ಲಿ 'ಹೋಗ್ಲಾ ಪಾಕಾ' ಬಳೆ ಎನ್ನುತ್ತಾರೆ. *(–ಅನು.)*

೩ ಶೀತಲಾದೇವಿ ಸಾಂಕ್ರಾಮಿಕ ರೋಗಗಳ, ವಿಶೇಷವಾಗಿ ಸಿಡುಬಿನ ಅಧಿ ದೇವತೆ ಎಂಬುದು ಸಾಮಾನ್ಯವಾದ ನಂಬಿಕೆ.

೪ ಮುತ್ತುಗದ ಎಲೆಯನ್ನು ಊಟ ಮಾಡಲು ಬಳಸುವಂತೆ, ಬಂಗಾಳ ದಲ್ಲಿ ಸಾಲವೃಕ್ಷದ ಎಲೆಯನ್ನು ಹೆಣೆದು ಊಟಕ್ಕೆ ಬಳಸುತ್ತಾರೆ.

ಆದರೆ ಗೋಲಾಪ್ ಮಾ ಶ್ರೀಮಾತೆಯವರ ಬಾಯಿ ಅಲುಗಾಡುತ್ತಿದ್ದದನ್ನು ನೋಡಿಬಿಟ್ಟಳು. ''ಅಮ್ಮಾ, ಏನು ತಿನ್ನುತ್ತಿದ್ದೀರಿ?'' ಎಂದಾಕೆ ಕೇಳಿದಳು. ಶ್ರೀಮಾತೆ, ''ಎರಡು ದಂಟು ನುಗ್ಗೆಕಾಯಿ ತಿಂದೆ, ಗೋಲಾಪ್'' ಎಂದರು. ಗೋಲಾಪ್ ಮಾ ಹೇಳಿದಳು, ''ನುಗ್ಗೇಕಾಯಿ? ಅದೂ ಅಡುಗೆ ಮಾಡಿದ್ದು! ಯಾರು ತಂದು ಕೊಟ್ಟರು? ಆಶು ಅಂತ ಕಾಣುತ್ತದೆ. ಶೂದ್ರರ ಕೈಯಿಂದ ಆಹಾರವನ್ನು ಹೇಗೆ ತಿನ್ನುತ್ತೀರಿ, ಅಮ್ಮಾ?'' ಅದಕ್ಕೆ ಶ್ರೀಮಾತೆ ಹೇಳಿದರು, ''ನೀನು ಇನ್ನು ಬಯ್ಯಬೇಡ, ಗೋಲಾಪ್. ಯಾರು ಶೂದ್ರ? ಅವನು ಭಕ್ತ, ಶಿಷ್ಯ. ಭಕ್ತರಿಗೆ ಜಾತಿ ಇದೆಯೆ?''

ಶ್ರೀಮಾತೆಯವರ ಉತ್ತರದಿಂದ ಗೋಲಾಪ್ ಮಾಗೆ ಮುಖಭಂಗವಾಯಿತು. ಆದರೆ ಕೂಡಲೇ ಅವಳ ದೃಷ್ಟಿ ಜೊಂಡು ಏನಾಯಿತೆಂದು ಹುಡುಕಾಡಿತು. ಯಾವುದೇ ಜೊಂಡು ಅಲ್ಲಿ ಕಾಣಿಸದಾಗ ಕೇಳಿದಳು, ''ಜೊಂಡು ಎಲ್ಲಿ ಹೋಯಿತು? ಅದನ್ನು ತಿಂದುಬಿಟ್ಟಿರಾ?'' ಶ್ರೀಮಾತೆ ನಗುತ್ತಿದ್ದುದನ್ನು ನೋಡಿ ಮತ್ತೆ ಕೇಳಿದಳು, ''ಅಮ್ಮಾ! ನರೇನ್ ಮೊದಲಾದವರೆಲ್ಲ ಠಾಕೂರರ ರಕ್ತದಿಂದ ಕೂಡಿದ ಕಫವನ್ನೇ ತಿಂದುಬಿಟ್ಟಿದ್ದರು. ನಾನು ಜೊಂಡು ತಿನ್ನುತ್ತೇನೆ'' ಎನ್ನುತ್ತ ಆಕೆ ಶ್ರೀಮಾತೆಯವರ ಬಳಿ ಬಿದ್ದಿದ್ದ ಜೊಂಡನ್ನು ಬಾಯಿಗೆ ಹಾಕಿಕೊಂಡು ಹೋಗಿಬಿಟ್ಟಳು. ಆಕೆ ಸರಳ ಬ್ರಾಹ್ಮಣ ಹೆಂಗಸು; ಅವಳ ಮನಸ್ಸಿಗೆ ತಾನು ಶೂದ್ರ ಮುಟ್ಟಿದ ಜೊಂಡನ್ನು ತಿನ್ನುತ್ತಿದ್ದೇನೆ ಎಂಬುದು ಹೊಳೆಯಲೇ ಇಲ್ಲ!

ಆಗ ಚಳಿ ವಿಪರೀತವಾಗಿತ್ತು. ಶ್ರೀಮಾತೆಯವರ ಕ್ಷೀಣ ದೇಹಕ್ಕೆ ಅದನ್ನು ತಡೆದುಕೊಳ್ಳುವುದು ತುಂಬಾ ಕಷ್ಟವಾಗುತ್ತಿದೆ ಎಂಬುದನ್ನು ನೋಡಿ, ಅವರಿಗೆ ಒಂದು ಅಂಗಿ ಅಥವಾ ಒಂದು ಬನಿಯನ್ ಹಾಕಿಸೋಣ ಎಂಬ ಬಯಕೆ ನಮಗುಂಟಾಯಿತು. ಶರತ್ ಮಹಾರಾಜರಿಗೆ ಇದನ್ನು ತಿಳಿಸಿದಾಗ ಅವರು ಹಣ ಕೊಟ್ಟರು. ಗಣೇಂದ್ರನಾಥ 'Whiteway Laid Law' ಅಂಗಡಿಯಿಂದ ೧೦ ರೂಪಾಯಿಗೆ ಒಂದು ರೇಷ್ಮೆಯ ಬನಿಯನ್ ಖರೀದಿಸಿ ತಂದ. ಶ್ರೀಮಾತೆಗೆ ಅದನ್ನು ಕೊಟ್ಟಾಗ ಅವರು ಆನಂದದಿಂದ ಅದನ್ನು ಧರಿಸಿದರು. ಮೂರುದಿನ ಬೆಳಿಗ್ಗೆ, ಸಾಯಂಕಾಲ ಮೇಲಿಂದ ಮೇಲೆ ಅದನ್ನು ಧರಿಸಿಕೊಂಡರು. ನಾಲ್ಕನೇ ದಿನ ಅದನ್ನು ಧರಿಸದಿದ್ದಾಗ ಅದೇಕೆಂದು ಕೇಳಿದೆವು. ಅದಕ್ಕೆ ಅವರು, ''ಹೆಂಗಸರು ಅಂಗಿ ಧರಿಸುವುದು ಸರಿಯೆ, ಮಗೂ? ಆದರೂ ನಾನು ನಿಮ್ಮ ಮನಸ್ಸಿಗೆ ಸಮಾಧಾನವಾಗಲಿ ಅಂತ ಮೂರು ದಿನ ಧರಿಸಿದೆ'' ಎಂದರು. ಇದನ್ನು ಬರೆಯುತ್ತಿದ್ದಂತೆ ಒಂದು ವಿಷಯ ನೆನಪಾಗುತ್ತಿದೆ. ಶ್ರೀಮಾತೆ ಎಡ ಕಂಕುಳದ ಕೆಳಭಾಗವನ್ನು ಅಂಗೈ ಅಳತೆಯ ವಸ್ತ್ರದಿಂದ ಹೇಗೆ ಮರೆ ಮಾಡುತ್ತಿದ್ದರೆಂದರೆ, ಅವರಿಗೆ ಅಂಗಿ ಅಥವಾ ಅಂತಹದರ ಅಗತ್ಯವೇ ಇರುತ್ತಿರಲಿಲ್ಲ. ಶ್ರೀಮಾತೆಯವರ ಹಣೆಯಲ್ಲಿ ಎರಡೂ ಹುಬ್ಬುಗಳ ನಡುವೆ, ಮಧ್ಯಭಾಗದಲ್ಲಿ ಒಂದು ಕಲೆಯಿತ್ತು. ಭೂತಗನ್ನಡಿಯಿಂದ ನೋಡಿದರೆ ಅವರ ದೊಡ್ಡ ಭಾವಚಿತ್ರದಲ್ಲಿ ಅದನ್ನು ಕಾಣಬಹುದು.

ಶ್ರೀಮಾತೆಯವರಿಗೆ ಸೀತಾಳೆ ಸಿಡುಬು ಬಂದಿದ್ದುದರಿಂದ ಮೊದಲನೆಯದಾಗಿ ಅವರ ದೇಹಾರೋಗ್ಯ ಕೆಟ್ಟಿತು. ಅಂತೆಯೇ ಅವರು ಮಂತ್ರದೀಕ್ಷೆ ಕೊಡುತ್ತಾ ಬಂದುದರಿಂದ ಅದು ಇನ್ನಷ್ಟು ಕೆಟ್ಟಿತು. ಅತ್ತ ರಾಮನ ತಾಯಿ* ಶ್ರೀಮಾತೆಯವರನ್ನು ತಮ್ಮ ಒಡಿಶಾದ ಕೊಠಾರ್‌ನಲ್ಲಿದ್ದ ಜಮೀನಿಗೆ ಕರೆದುಕೊಂಡು ಹೋಗಬೇಕೆಂದು ಬಹಳ ದಿನಗಳಿಂದ ಬಯಸಿದ್ದಳು. ಈಗ ಅದಕ್ಕೆ ಒಳ್ಳೆಯ ಸುವರ್ಣಾವಕಾಶ ಒದಗಿ ಬಂದಿದೆಯೆಂದು ಆಕೆ ಅವರನ್ನು ಪೀಡಿಸತೊಡಗಿದಳು. ಅದರಿಂದಾಗಿ ಶ್ರೀಮಾತೆ ೧೯೧೧ರ ಅಗ್ರಹಾಯಣ ಮಾಸದಲ್ಲಿ ಅಲ್ಲಿಗೆ ಹೋಗುವುದೆಂದು ನಿಶ್ಚಯವಾಯಿತು. ಅಲ್ಲಿಗೆ ಹೊರಡುವ ದಿನ ಬೆಳಿಗ್ಗೆ ಬೇಲೂರು ಮಠದಿಂದ ಎಲ್ಲರೂ ಶ್ರೀಮಾತೆಯವರ ಬಳಿಗೆ ಬಂದು ಪ್ರಣಾಮ ಮಾಡಿದರು. ಶ್ರೀಮಾತೆಯವರೊಂದಿಗೆ ಹೊರಡಲಿರುವ ಭಕ್ತರೊಂದಿಗೆ ಶುಕುಲ್ ಮಹಾರಾಜ್ (ಸ್ವಾಮಿ ಆತ್ಮಾನಂದ) ಹಾಗೂ ಕೃಷ್ಣಲಾಲ್ (ಸ್ವಾಮಿ ಧೀರಾನಂದ) ಕೂಡ ಹೋಗುವರೆಂಬುದು ನಿಶ್ಚಯವಾಯಿತು. ನಾನು ಆಗ ಉದ್ಬೋಧನ ಕಾರ್ಯಾಲಯದ ಕೆಲಸಗಳಲ್ಲಿ ತೊಡಗಿಕೊಂಡಿದ್ದೆ. ಆದ್ದರಿಂದ ನಾನು ಹೋಗುವುದು ಸಾಧ್ಯವಿರಲಿಲ್ಲ. ಕೊನೆಯ ಗಳಿಗೆಯಲ್ಲಿ ಮೇಲಂತಸ್ತಿನಿಂದ ಬಂದ ಕೃಷ್ಣಲಾಲ್, ರಾಖಾಲ್ ಮಹಾರಾಜರಿಗೆ (ಸ್ವಾಮಿ ಬ್ರಹ್ಮಾನಂದರು, ಆಗ ರಾಮಕೃಷ್ಣ ಮಹಾಸಂಘದ ಪ್ರೆಸಿಡೆಂಟ್) ಹೇಳಿದರು, ''ಶ್ರೀಮಾತೆ ಹೇಳುತ್ತಿದ್ದಾರೆ, ಆಶು ಹೊರಡುವನು ಅಂತ.'' ಆದ್ದರಿಂದ ಸ್ವಾಮಿ ಬ್ರಹ್ಮಾನಂದರ ಆಣತಿಯಂತೆ, ಅವಸರವಾಗಿ ಕೆಲಸಗಳನ್ನೆಲ್ಲ ವಿಲಾಸ್‌ಗೆ ತಿಳಿಸಿಕೊಟ್ಟು, ನಾನು ಶ್ರೀಮಾತೆಯವರ ಸೇವಕನಾಗಿ ಹೊರಟೆ. *(ಮುಂದುವರಿಯುವುದು)*

---

* ಕೃಷ್ಣಭಾವಿನಿ ಬಸು, ಬಲರಾಮ ಬಸುವಿನ ಪತ್ನಿ, ರಾಮಕೃಷ್ಣ ಬಸುವಿನ ತಾಯಿ. *(–ಸಂ.)*

## ಕೃಷ್ಣಪ್ರಾಪ್ತಿಯ ವಿಧಾನ



''ದೇಹತ್ಯಾಗದಿಂದ ಕೃಷ್ಣಪ್ರಾಪ್ತಿಯಾಗುವುದಿಲ್ಲ. ಹಾಗೆ ಆಗುವುದಿದ್ದರೆ, ನಾನು ಕೋಟಿ ಬಾರಿ ದೇಹತ್ಯಾಗ ಮಾಡುತ್ತಿದ್ದೆ. ದೇಹತ್ಯಾಗದಿಂದ ಅಲ್ಲ, ಭಜನೆಯಿಂದ ಕೃಷ್ಣಪ್ರಾಪ್ತಿಯಾಗುತ್ತದೆ. ಭಕ್ತಿಯನ್ನು ಬಿಟ್ಟು ಅವನನ್ನು ಪಡೆಯಲು ಬೇರೆ ಉಪಾಯವಿಲ್ಲ. ದೇಹತ್ಯಾಗವು ತಮೋಧರ್ಮ. ತಮೋ-ರಜೋಧರ್ಮದಿಂದ ಕೃಷ್ಣನ ಮರ್ಮ ಅರ್ಥವಾಗುವುದಿಲ್ಲ. ಭಕ್ತಿಯಲ್ಲದೆ ಕೃಷ್ಣಪ್ರೇಮ ಉದಿಸದು. ಪ್ರೇಮವಿಲ್ಲದೆ ಯಾವ ಬಗೆಯಲ್ಲೂ ಕೃಷ್ಣಪ್ರಾಪ್ತಿಯಾಗದು. ದೇಹತ್ಯಾಗವು ಪಾಪದ ಮೂಲ.''

— ಚೈತನ್ಯ ಮಹಾಪ್ರಭು

# ರಾಧಿಕಾ ರಾಣಿ

## 'ಉಮೆ'

ಮೂಲ : 'Swami Vivekananda: The Great Inspirer', ರಾಮಕೃಷ್ಣ ಶಾರದಾ ಮಿಷನ್ ಪ್ರಕಟಣೆ
ಅನುವಾದ : ಸ್ವರ್ಣಗೌರಿ

ಒಂದು ದಿನ ಬೆಳಗ್ಗೆ ಕ್ಷೀರಭವಾನಿಯ ಮಂದಿರದಲ್ಲಿ ಯುವ ಸಂನ್ಯಾಸಿಯೊಬ್ಬ ಗಾಢವಾದ ಧ್ಯಾನದಲ್ಲಿ ಲೀನವಾಗಿದ್ದುದನ್ನು ಕಂಡು ಸ್ವಾಮಿ ರಾಮ್‌ಜೀ (ಕಾಶ್ಮೀರದ ಮಹಾನ್ ಶಿವಯೋಗಿ) ನೆರೆಹೊರೆಯಲ್ಲಿ ವಿಚಾರಿಸಲು, ಆ ಪ್ರಶಾಂತ ಮೊಗದ ಯುವ ಸಂನ್ಯಾಸಿಯು ಹಿಂದಿನ ದಿನ ಸಂಜೆಯಿಂದಲೂ ಹಾಗೆಯೇ ಅಲುಗಾಡದೆ ನಿಶ್ಚಲನಾಗಿ ಕುಳಿತಿರುವನೆಂದು ತಿಳಿದು ಬಂತು. ತಾಯಿ ಜಗನ್ಮಾತೆಗೆ ನಿವೇದಿಸಿದ ಕ್ಷೀರವನ್ನು ತರಿಸಿ ಆ ಯುವ ಸಂನ್ಯಾಸಿಯ ಮುಂದಿಟ್ಟು ಸ್ವಾಮಿ ರಾಮ್‌ಜೀ ಶಿವನನ್ನು ಕುರಿತಾದ ಸ್ತೋತ್ರಗಳನ್ನು ಹಾಡತೊಡಗಿದರು. ಬಹಳ ಹೊತ್ತಿನ ನಂತರ ಆ ಯುವ ಸಂನ್ಯಾಸಿ ಕಣ್ಣು ತೆರೆದಾಗ ಸ್ವಾಮಿ ರಾಮ್‌ಜೀ ಕರಜೋಡಿಸಿ ಕ್ಷೀರವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದರು. ಅದೇ ಸಮಯದಲ್ಲಿ ಪಂಡಿತ ಆನಂದ್‌ಜೂ ಧಾರ್‌ಜೀ ತಮ್ಮ ಎಂಟು ವರ್ಷ ವಯಸ್ಸಿನ ಮಗಳು 'ರಣಿನ್‌ಡೆಡ್'ಳೊಡನೆ ಅಲ್ಲಿಗೆ ಬಂದರು. ಸ್ವಾಮಿ ರಾಮ್‌ಜೀ, ಧಾರ್‌ನನ್ನು ಯುವ ಸಂನ್ಯಾಸಿಯ ಬಳಿಗೆ ಬರಲು ಕೈಸನ್ನೆ ಮಾಡಿದರು. ಧಾರ್ ಅವರ ಮಗಳನ್ನು ನೋಡಿದ ಆ ಸಂನ್ಯಾಸಿಯು ಆಕೆಯನ್ನು ಪೂಜಿಸುವ ಇಚ್ಛೆಯನ್ನು ಪ್ರಕಟಿಸಿ, ರಾಮ್‌ಜಿ ಅಭಿಪ್ರಾಯ ಕೇಳಿದರು. ಎಲ್ಲರೂ ಆನಂದದಿಂದ ಒಪ್ಪಿದರು. ಮಾರನೆ ದಿನ ದೇಗುಲದಲ್ಲಿ ಸಡಗರದ ವಾತಾವರಣ ಏರ್ಪಟ್ಟಿತು. ಪ್ರಾತಃಕಾಲ ಬ್ರಾಹ್ಮೀ ಮುಹೂರ್ತದಲ್ಲಿ ಸ್ವಾಮೀಜಿ ಆ ಬಾಲಕಿಯನ್ನು, ಸಾಕ್ಷಾತ್ **ಉಮೆ** ಎಂದು ಪೂಜಿಸಿದರು.

ಈ ಘಟನೆಯ ಒಂದೆರಡು ವರ್ಷಗಳ ತರುವಾಯ ರಣಿನ್‌ಡೆಡ್‌ಳು ವಿವಾಹವಾಗಿ ಗೃಹಸ್ಥ ಜೀವನಕ್ಕೆ ಕಾಲಿಟ್ಟಳು. ಪತಿಯ ಮನೆಯವರು ಆಕೆಯ ಹೆಸರನ್ನು ರಾಧಿಕಾರಾಣಿ ಎಂದು ಬದಲಿಸಿದರು. ಸ್ವಾಮಿ ವಿವೇಕಾನಂದರಿಂದ ಬಾಲ್ಯದಲ್ಲೇ ಪೂಜಿತಳಾದ ಕಾರಣ ಮುಂದೆ ತನ್ನ ಜೀವನದಲ್ಲಿ ಎದುರಾದ ಅವಘಡಗಳನ್ನೆಲ್ಲಾ ಶಾಂತಚಿತ್ತದಿಂದ ಎದುರಿಸುವ ಶಕ್ತಿ ಪಡೆದಿದ್ದಳು. ತನ್ನೆರಡು ಗಂಡು ಮಕ್ಕಳನ್ನು ಕಳೆದುಕೊಂಡಾಗ ಅವಳ ಶಾಂತಭಾವವನ್ನು ನೋಡಿದ ಜನ ಬೆರಗಾದರು. ಆಕೆ ಸದಾ ಶಾಂತಚಿತ್ತಳೂ, ಮೃದು ಮಾತಿನವಳೂ, ದಯಾಪರಳೂ, ಮಧುರಕಂಠದವಳೂ ಆಗಿದ್ದಳು. ಆಕೆಯ ಇಬ್ಬರು ಹೆಣ್ಣುಮಕ್ಕಳು – ಸಾರಿಕಾದೇವಿ ಹಾಗೂ ಪ್ರಭಾದೇವಿ ಸಂನ್ಯಾಸ ಜೀವನ ಸ್ವೀಕರಿಸಲು ತಾಯಿಯ ಅನುಮತಿ ಕೇಳಲು, ಹೆಮ್ಮೆಯಿಂದ ಇಬ್ಬರನ್ನು ಭಗವಂತನಿಗೆ ಸಮರ್ಪಿಸುವಲ್ಲಿ ರಾಧಿಕಾರಾಣಿ ತಲುಪಿದ ಉನ್ನತ ಆಧ್ಯಾತ್ಮಿಕ ಸ್ಥಿತಿಯನ್ನು ಊಹಿಸಬಹುದು. ಮಕ್ಕಳಿದ್ದೂ ಇಲ್ಲದಂತಿದ್ದ ರಾಧಿಕಾರಾಣಿ ನಿಜಕ್ಕೂ ಬಹು ದೊಡ್ಡ ಕರ್ಮಯೋಗಿಯೇ ಸರಿ. ತನ್ನ ಮನೆಯ ಬಳಿಯೇ ಇದ್ದ ಅನಾಥ ಮಕ್ಕಳ ಜವಾಬ್ದಾರಿಯನ್ನು ಸ್ವ-ಇಚ್ಛೆಯಿಂದ ಹೊತ್ತಳು. ತನ್ನೆಲ್ಲಾ ಧಾರ್ಮಿಕ ಕಾರ್ಯಕಲಾಪಗಳಲ್ಲಿ ತನ್ನ ಪತಿಯ ಮನೆಯವರ ಸಹಕಾರ ಹೇರಳವಾಗಿ ಪಡೆದ ಭಾಗ್ಯವಂತೆ ಈಕೆ. ಊರಿನ ಜನರೆಲ್ಲಾ ಆಕೆಯನ್ನು ಪ್ರೀತಿಯಿಂದ ಭಾಬೀಜೀ (ಅತ್ತಿಗೆ) ಎಂದು ಕರೆಯುತ್ತಿದ್ದರು.



ರಾಧಿಕಾರಾಣಿಯ ತಾಯಿ ಅರಣಿಮಲ್ ಧಾರ್ ಬಾಲ್ಯದಿಂದಲೇ ಭಗವದ್‌ಭಕ್ತಳಾಗಿದ್ದಳು. ಶಾಲಾ, ಕಾಲೇಜುಗಳಿಗೆ ಹೋಗಿ ವಿದ್ಯಾರ್ಜನೆ ಮಾಡುವ ಸುಯೋಗ ದೊರೆಯದಿದ್ದರೂ ಚುರುಕು ಬುದ್ಧಿಯವಳಾಗಿದ್ದಳು. ಸಾಧುಸಂತರ ಮೇಲೆ ವಿಶೇಷ ಶ್ರದ್ಧಾಭಕ್ತಿಗಳಿದ್ದವು. ನಿತ್ಯವೂ ಪೂಜೆ, ಜಪ, ಧ್ಯಾನ, ಉಪವಾಸ ಇತ್ಯಾದಿ ಧಾರ್ಮಿಕ ಕಾರ್ಯಗಳನ್ನು ಚಾಚೂ ತಪ್ಪದೆ ನಿಯತವಾಗಿ ಪಾಲಿಸುತ್ತಿದ್ದಳು. ಭಕ್ತಿಮತಿಯಾದ ಆಕೆ ಮನೆದೇವತೆ ಕ್ಷೀರಭವಾನಿಯ ಪೂಜೆಗೆ ಅಣಿಮಾಡುವುದರಲ್ಲೇ ಸದಾ ನಿರತಳಾಗಿರುತ್ತಿದ್ದಳು. ಪರಮಸಾತ್ತ್ವಿಕ ಶಿರೋಮಣಿಯಾದ ಆಕೆ ಉಪವಾಸ ವ್ರತದ ನಂತರ ಮೊದಲಿಗೆ ಸಾಧುಸಂತರಿಗೆ ಉಣಬಡಿಸಿ, ನಂತರ ತಾನು ಉಣ್ಣುತ್ತಿದ್ದಳು.

ಒಮ್ಮೆ ಸ್ವಾಮಿ ವಿವೇಕಾನಂದರನ್ನು ತನ್ನ ಮನೆಗೆ ಊಟಕ್ಕೆ ಆಹ್ವಾನಿಸಿದ್ದಳು. ಆದರೆ ಸ್ವಾಮೀಜಿ ಸಂಜೆ ತಡವಾಗಿ ಬಂದು ತಲುಪಿದರು. ಅಷ್ಟು ಹೊತ್ತಿಗಾಗಲೇ ಅನೇಕರು ಸ್ವಾಮೀಜಿಯವರ ದರ್ಶನಕ್ಕಾಗಿ ಕಾಯುತ್ತಿದ್ದರು. ಕಾಶ್ಮೀರದ ಪಂಡಿತರು ಶಿವನ ಆರಾಧಕರು. ಸ್ವಾಮೀಜಿ ಮನೆದೇವತೆಗೆ ಪ್ರಣಾಮ ಸಲ್ಲಿಸಿ, ಕಾಯುತ್ತಿದ್ದ ಪಂಡಿತರನ್ನು ಉದ್ದೇಶಿಸಿ ಮಾತನಾಡಲು ಉದ್ಯುಕ್ತರಾದರು. ನಂತರ ಎರಡು ಭಜನೆಗಳನ್ನು ಹಾಡಿದರು. ಅವರ ಅಗಾಧ ಜ್ಞಾನದ ಮುಂದೆ ಪಂಡಿತರ ಮಸ್ತಕಗಳು ತಾವೇ ತಾವಾಗಿ ಬಾಗಿದವು. ತಮ್ಮ ಭಕ್ತಿಗೌರವಗಳ ದ್ಯೋತಕವಾಗಿ ಯಥಾಶಕ್ತಿ ಕಾಣಿಕೆ ನೀಡಿ ಪ್ರಣಾಮ ಸಲ್ಲಿಸಿದರು. ತಮಗೆ ಬಂದ ಕಾಣಿಕೆಯನ್ನೆಲ್ಲಾ ಸ್ವಾಮೀಜಿ ರಾಮ್‌ಜೀ ನಡೆಸುತ್ತಿದ್ದ ಆಶ್ರಮದ ಸೇವಾ ಕಾರ್ಯಗಳಿಗೆ ನೀಡಿದರು.



# ಅರುಹೇ ಆರೋಗ್ಯ ಮರಹೇ ರೋಗ !

ಪ್ರೊ. ಜಿ. ಎಚ್. ಹನ್ನೆರಡುಮಠ

ಬಾಳಿನ ಸಂಜೆಯ ಜೀವನದಲ್ಲಿ ಶಾಂತಿ, ತೃಪ್ತಿ, ಆನಂದದ ಚಿಲುಮೆಯನ್ನು ಚಿಮ್ಮಿಸಬಲ್ಲ ಆಲೋಚನೆಗಳು ಅಗತ್ಯ, ಕ್ರಿಯೆಗಳೂ ಅಗತ್ಯ. ಅದಕ್ಕೆ ಯೋಗ್ಯವಾದ ಮನೋಭಾವವನ್ನು ರೂಪಿಸುವುದು, ದೈನಂದಿನ ಚಟುವಟಿಕೆಗಳನ್ನು ಕಂಡುಕೊಳ್ಳುವುದು ಎಲ್ಲರಿಗೂ ನೆಮ್ಮದಿ ನೀಡಬಲ್ಲ ಸಾಧನವಾಗಿದೆ. ಈ ಹಿನ್ನೆಲೆಯಲ್ಲಿ ತಮ್ಮ ವಿಚಾರಗಳನ್ನು ಹಂಚಿಕೊಂಡಿರುವ ಲೇಖಕರು ಬಾಗಲಕೋಟೆ ಜಿಲ್ಲೆಯ ಇಳಕಲ್‌ನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಬಳಿಕ ಪ್ರಾಂಶುಪಾಲರಾಗಿ ನಿವೃತ್ತರಾದವರು. ಕವಿತೆ, ಕಥೆ, ಕಾದಂಬರಿ, ವಿಚಾರ ಸಾಹಿತ್ಯವೇ ಮೊದಲಾದ ಪ್ರಕಾರಗಳಲ್ಲಿ ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿರುವ ಅವರು ಪ್ರಸ್ತುತ ಬೆಂಗಳೂರಿನಲ್ಲಿ ವಿಶ್ರಾಂತ ಜೀವನವನ್ನು ನಡೆಸುತ್ತಿದ್ದಾರೆ.

ಹೌದು... ಇಂದಿನ ಸಂಕೀರ್ಣ ಸಂಘರ್ಷಗಳ ಅನಿಶ್ಚಿತ ಪರಿಸರದಲ್ಲಿ ಅಸ್ಥಿರತೆ ನಮ್ಮನ್ನು ತೊತ್ತಳದುಳಿದು ತೊಡ್ರಾಬಡ್ರಾ ಕಾಡುತ್ತಿದೆ ! ಕಂಡದ್ದು ಕಂಡಂತಿಲ್ಲ ! ಕೊಂಡದ್ದು ಕೊಂಡಂತಿಲ್ಲ ! ನುಡಿಯಲ್ಲಿ ನಡೆ ಇಲ್ಲ ! ನಡೆಯಲ್ಲಿ ನುಡಿಯ ಮಿಂಚಿಲ್ಲ ! ಎಲ್ಲವೂ ಹೊಂಚುಹಾಕಿದ ಕರಿಯ ಬೆಕ್ಕಿನ ಹಗಲು ಕನಸು ! ಏನು ಮಾಡಲಿ?

ಒಂದು ಮಾತು ನಿಜ. ಇದು ವೇಗವಾಗಿ ಸಾಗುತ್ತಿರುವ ಸಾಮಾಜಿಕ-ಸಾಂಸ್ಕೃತಿಕ ಅಗಾಧ ಪರಿವರ್ತನೆಯ ಕಾಲ. ಕ್ಷಣಕ್ಷಣಕ್ಕೂ ವಿಜ್ಞಾನ ಹೊಸ ಆವಿಷ್ಕಾರಗಳಿಂದ ಪುಟಿದೇಳುತ್ತಿದೆ. ಅಜ್ಞಾನದಿಂದ ಸುಜ್ಞಾನಕ್ಕೆ ಜೋಕಾಲಿ ಜೀಕುವ ಸುಂದರ ಕಾಲ ಇದೇ ಆಗಿದೆ. ಇದು ನೂರು-ನೂರು ಚಾಲೇಂಜುಗಳನ್ನು ಅಪ್ಪಿಕೊಳ್ಳುವ ಒಪ್ಪಿಕೊಳ್ಳುವ ವೀರ-ಧೀರರ ಕಾಲ. ನಾವು ಹೇಡಿಗಳಾಗಿ ಬೆಚ್ಚಗೆ ಮಲಗುವ ಕಾಲ ಖಂಡಿತ ಅಲ್ಲ.... ಇಲ್ಲಿ ದುಡಿಮೆಯೇ ಧೂಪಾರತಿ ! ಪ್ರೀತಿಯೇ ಪಂಚಾರತಿ ! ಕಾಯಕವೇ ಕರ್ಪುರಾರತಿ!

ಓ ಹೌದು ! ಮರೆತೇ ಬಿಟ್ಟಿದ್ದೆ ! ಅಂದು ಬೆಂಗಳೂರಿನ ಬಸ್ಸಿನಲ್ಲಿ ನಾನು ನಿಂತು ಪ್ರಯಾಣಿಸುತ್ತಿದ್ದಾಗ ಹೆಣ್ಣುಮಕ್ಕಳಿಗಾಗಿಯೇ ಮೀಸಲಿಟ್ಟಿದ್ದ ಸೀಟಿನಲ್ಲಿ ಕುಂತಿದ್ದ ಒಬ್ಬಳು ಕಾಲೇಜು ಹುಡುಗಿ ತಕ್ಷಣವೇ ಎದ್ದು.... ''ಅಂಕಲ್.... ಬನ್ನಿ ಇಲ್ಲಿ ಕೂತುಕೋಬನ್ನಿ'' ಅಂತ ಹೇಳಿ; ತಾನು ನಿಂತು ನನ್ನನ್ನು ಕುಳ್ಳಿರಿಸಿದಳು. ಅಬ್ಬಬ್ಬಾ.... ಇನ್ನೊಂದು ಘಟನೆ ! ಓ ಹೌದು.... ನಾನು ಲಂಡನ್ನಿನಲ್ಲಿ ಬ್ರಿಟಿಷ್ ಏರವೇಸ್ ವಿಮಾನದ ಮೆಟ್ಟಿಲನ್ನು ಪ್ರಯಾಸದಿಂದ ಇಳಿಯುತ್ತಿದ್ದಾಗ ಒಬ್ಬಳು ಗಗನಸಖಿ ಓಡಿಬಂದು ನನ್ನ ರಟ್ಟೆಗೆ ರಟ್ಟೆ ಹಾಕಿ ಹಿಡಿದು; ನನ್ನ ಲಗೇಜನ್ನು ಇನ್ನೊಂದು ಕೈಯಲ್ಲಿ ಹೊತ್ತು ಇಳಿದಳು. ತಕ್ಷಣ ಒಂದು ಏರ್‌ಪೋರ್ಟ್ ಪಿಕಪ್ ವಾಹನವನ್ನು ಕರೆದು ಕುಳ್ಳಿರಿಸಿ; ಗುಡ್ ಬಾಯ್ ಹೇಳಿ, ನಾನು ಅಮೇರಿಕೆಗೆ ಹೋಗುವ ಸ್ಯಾನ್‌ಫ್ರಾನ್ಸಿಸ್ಕೋ ವಿಮಾನ ಏರಲು ನೆರವಾದಳು. ಹಿರಿಯ ನಾಗರಿಕರಿಗೆ ಇರುವ ಅವಳ ಕ್ರಿಯಾಶೀಲ ಗೌರವವನ್ನು ನಾನು ಹೇಗೆ ಮರೆಯಲಿ ?

ನಿಜ. ಮುಪ್ಪು ತಪ್ಪಲ್ಲ. ಮುಪ್ಪು ಅಂತರಂಗದ ಅರುಹಿನ ಒಪ್ಪು! ಪ್ರೀತಿ-ಪರಿಮಳದ ಒನಪು ! ಮಾನವೀಯತೆ ಇರುವ ನೆಲೆಯಲ್ಲಿ ಇದೊಂದು ತಂಪಿನ ಕಾಲ. ನಿಶ್ಚಿಂತ ಕಾಲ. ಹೊರಗೆ ನಿಸರ್ಗದ ನಿಯಮದಂತೆ ವೃದ್ಧಾಪ್ಯ ಹೆಜ್ಜೆ ಇಟ್ಟರೂ; ಅಂತರಂಗದಲ್ಲಿ ಸ್ಥಿತಪ್ರಜ್ಞ ಸ್ಥಿತಿ, ಬೆಳಕಿನ ಬೆಳಕು ಕೈಹಿಡಿಯುವ ಕಾಲ. ಸಾಮಾನ್ಯರಿಗೆ ಇದು ಸಾಯುವ ಕಾಲ; ಜ್ಞಾನಿಗಳಿಗೆ ಬೆಳಕಿನ ಬಾಗಿಲು ತೆರೆಯುವ ಸುಂದರ ಕಾಲ !

ಅಬೂ ಪರ್ವತದ ಗ್ಲೋಬಲ್ ಹಾಸ್ಪಿಟಲಿನ ಡಾ. ಮಹೇಶ ಹೇಮಾದ್ರಿ, ಅವರ 'ಏಜಿಂಗ್ ಗ್ರೇಸ್‌ಫುಲಿ' ಲೇಖನ ಈ ನಿಟ್ಟಿನಲ್ಲಿ ತುಂಬ ಅರ್ಥಪೂರ್ಣವಾಗಿದೆ. ೬೦- ೭೦- ೮೦- ೯೦ ರ ಈ ಟೆಂಟಿನಲ್ಲಿದ್ದ ನಾವು ನಮಗೆ ನಾವೇ ಬಂಟರು ! ನಮ್ಮ ಪ್ರಜ್ಞೆಯೇ ನಮ್ಮ ಆಯುಧ ! ನಮ್ಮ ಹಿರಿಯರ ಅರುಹೇ ನಮ್ಮ ಶಿರಸ್ತ್ರಾಣ !

ನನ್ನ ತಾಯಿಗೆ ಈಗ ೯೯ ವರ್ಷ. ಶಾಲೆಯಲ್ಲಿ ಕೇವಲ ೨ನೇ ವರ್ಗ ಪಾಸಾದವಳು. ಹಿಂದಿನ ನೆನಪುಗಳನ್ನು ಪಟಪಟ ಹೇಳುತ್ತಾಳೆ. ಹುಬ್ಬಳ್ಳಿಯಲ್ಲಿ ಅಂದಾಜು ೭೫ ವರ್ಷಗಳ ಹಿಂದೆ ಗಾಂಧೀಜಿ ಬಂದಾಗ ಅವರೊಂದಿಗೆ ಹರಿಜನ ಕೇರಿಗೆ ಪಾದಯಾತ್ರೆ ಮಾಡಿದ ಸ್ಪಷ್ಟ ನೆನಪು ಅವರಿಗಿದೆ. ಕ್ಷಣಕ್ಕೊಮ್ಮೆ ಶಿವಾ ಶಿವಾ ಅನ್ನುವದೇ ಅವರ ಆರೋಗ್ಯದ ಸೂತ್ರ. ಜೊತೆಗೆ ನಗುಮುಖವೇ ಅವರ ಇರುಹು, ಅರುಹು. ಅವರ ಎದುರಿಗೆ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಕೂಡ ಸತ್ತರೂ ಶಾಂತ ಶೀತಲ ಮುಖಮುದ್ರೆ. ಅವಳ ದೈವಶ್ರದ್ಧೆ, ಧೈರ್ಯ, ಪ್ರೀತಿಗಳೇ ಅವಳ ಶತಮಾನೋತ್ಸವಕ್ಕೆ ನಾಂದೀದೀಪವಾಗಿದೆ.

ಬದಲಾವಣೆಯೇ ಬದುಕಿನ ಮೂಲ ಲಕ್ಷಣ. ಬಾಳು ನಿಂತ ನೀರಲ್ಲ. ಪಾಚಿ ಕಟ್ಟಿದ ಕೆಸರಲ್ಲ. ಬೀಸುತ್ತಿರುವ ತಂಗಾಳಿ. ಅರಳುತ್ತಿರುವ ಕಮಲ. ಕೂಗುತ್ತಿರುವ ಕೋಗಿಲೆ. ''ಸ್ಥಾವರಕ್ಕಳಿವುಂಟು.... ಜಂಗಮಕ್ಕಳಿವಿಲ್ಲ !'' ಯಾವುದು ಸ್ಥಾವರವೋ (ಸ್ಟ್ಯಾಟಿಕ್) ಅದು ನಾಶವಾಗುತ್ತದೆ. ಯಾವುದು ಜಂಗಮವೋ (ಡೈನಾಮಿಕ್) ಅದು ಬೆಳೆಯುತ್ತದೆ, ಬೆಳಗುತ್ತದೆ.

ಹಾಂ.... ವಿಚಿತ್ರ ! ಈ ಕೆಲವರು ಅಜ್ಜ-ಅಜ್ಜಿಯರು (ನನ್ನನ್ನೂ ಹಿಡಿದು) ಭಜಿ-ಮಿರ್ಚಿ ತಿನ್ನುವದನ್ನು ಕಂಡಿದ್ದೇನೆ. ಪವಿತ್ರ ಆಹಾರದ ಮುಖ್ಯ ಲಕ್ಷಣವೆಂದರೆ... ''ಆಹಾರವೇ ಬೇರೆ! ಔಷಧಿಯೇ ಬೇರೆ ! ಅಲ್ಲ. ನಮ್ಮ ಆಹಾರವೇ ಔಷಧಿಯಾಗಬೇಕು.'' ನೈಸರ್ಗಿಕ ಆಹಾರದ ಈ ಸಿದ್ಧಾಂತವನ್ನು ನನ್ನ ಮೇಲೆ ನಾನೇ ಪ್ರಯೋಗಿಸಿಕೊಂಡೆ. ರಾಗಿಗಂಜಿ, ಹಸಿರು ತರಕಾರಿ, ಹಾಗಲಕಾಯಿ, ನವಿಲಕೋಲು ಪಚಡಿ, ಮೊಳಕೆ

ಬರಿಸಿದ ಕಾಳು ಇಂಥವುಗಳನ್ನು ಮುಖ್ಯ ಆಹಾರವಾಗಿ ಬಳಸಿದೆ. ಭಜಿ- ಮಿರ್ಚಿ - ಬೋಂಡಾ- ಸೂಪ್ಸ್- ದೋಸೆ- ಅಮ್ಲೇಟ- ಚಿರೋಟು- ಪೀಜಾ- ಘರಂ ಮಸಾಲಿಯ ಸ್ನ್ಯಾಕ್ಸ ಮುಂತಾದ ಆಹಾರದ ಕುಲಿನರಿಗಳು ನಮ್ಮ ಬಾಯಿಗೆ ಮಸ್ತ ಮಸ್ತ ರುಚಿ ಕೊಡುವ ಇಲಿಮರಿ ಆಗಿವೆ. ಆದರೆ ಅವು ಶರೀರಕ್ಕೆ ವಿಷ. ನೈಸರ್ಗಿಕ ಆಹಾರ ಪದ್ಧತಿ, ಯೋಗ, ಧ್ಯಾನ, ಚಿಂತನೆಗಳು ಸಮತೂಕದಲ್ಲಿ ಒಂದಾಗುವ ಕಲೆಯೇ ಜೀವನಕಲೆ. ನಮ್ಮ ಮುಪ್ಪಿನ ಶರೀರವೂ ಒಂದು ಮುಗ್ಧ ಮಗುವಿದ್ದಂತೆ. ಮಗುವಿಗೆ ತಾಯ ಹಾಲು ಬೇಕು, ಮುಪ್ಪಿಗೆ ಪ್ರೀತಿಯ ಸಾತ್ವಿಕ ಜೀವನ ಪದ್ಧತಿ ಬೇಕು ! ಮುಪ್ಪನ್ನು ಪ್ರೀತಿಸುವದೂ ಒಂದು ಸುಂದರ ಕಲೆ.

ವೃದ್ಧಾಪ್ಯದ ಶುಶ್ರೂಷೆಗಳ ಕುರಿತಾಗಿ ವೈಜ್ಞಾನಿಕವಾಗಿ ಸಂಶೋಧನೆ ನಡೆಸಿದ ರಾಜಸ್ಥಾನದ ಅಬೂಪರ್ವತದ ಗ್ಲೋಬಲ್ ಹಾಸ್ಪಿಟಲಿನ ಸಂಶೋಧನಾ ಕೇಂದ್ರದ ವೈದ್ಯರಾದ ಡಾ. ಅರವಿಂದ ಮಾಥೂ, ಡಾ. ಗೌರವ ಅಗ್ರವಾಲ, ಡಾ. ರೇಣು ಜಾನ್, ಡಾ. ನಿಖಿಲ ಪಟೇಲ ; ಹಾಗೂ ಕನ್ನಡದವರೇ ಆದ ಡಾ. ಮಹೇಶ ಹೇಮಾದ್ರಿ, ತಂಡದ ಸಕಾಲಿಕ ಸೂತ್ರವಾದ... ''ವೃದ್ಧಾಪ್ಯದ ಉನ್ನತೀಕರಣದ ಸಿದ್ಧಾಂತ'' ಸಹಜ ರಾಜಯೋಗದ ದೊಡ್ಡ ಕೊಡುಗೆಯೇ ಆಗಿದೆ. ಮುಪ್ಪು ಸೋಲಿನ ಸಂಕೇತವಾಗಿರದೇ ಮಹಾಪರಿವರ್ತನೆಯ ಕಾಲ. ದೇಹಭಾವ (ಬಾಡಿ ಕಾನ್‌ಶಸ್‌ನೆಸ್) ಮರೆತು, ಪ್ರಜ್ಞಾಚೇತನದಲ್ಲಿ ಅಂತರ್ಮಾನಸ ಪ್ರಜ್ಞೆಯಲ್ಲಿ ಮಹಾಪರಿವರ್ತನೆ ಸಾಧಿಸುವ ಸುಂದರ ಕಾಲವೇ ಈ ಎತ್ತರದ ಉತ್ತುಂಗ ವಯೋಘಟ್ಟ. ಇದಕ್ಕೆ ಇಂಟರ್ನಲ್ ಟ್ರಾನ್ಸಫಾರ್ಮೇಶನ್ ಎಂತಲೂ, ಯುನಿವ್ಹರ್ಸಲ್ ಟ್ರಾನ್ಸಫಾರ್ಮೇಶನ್ ಎಂತಲೂ ಎರಡು ಸುಂದರ ರಾಜಮಾರ್ಗಗಳು. ಆತ್ಮಪರಿವರ್ತನೆಯೂ ಒಂದು ಸ್ವಾರ್ಥವೇ. ಆತ್ಮ ಪರಿವರ್ತನೆಯ (ಸೆಲ್ಫ್ ಟ್ರಾನ್ಸಫಾರ್ಮೇಶನ್) ಗುರಿಯೇ ವಿಶ್ವ ಪರಿವರ್ತನೆ (ಯುನಿವ್ಹರ್ಸಲ್ ಟ್ರಾನ್ಸಫಾರ್ಮೇಶನ್). ಇದನ್ನೇ ಶರಣರು 'ಆತ್ಮಕಲ್ಯಾಣ', 'ವಿಶ್ವಕಲ್ಯಾಣ' ಪದಗಳಿಂದ ಗುರುತಿಸಿದ್ದಾರೆ. ಇದೇ ಸಹಜ ರಾಜಯೋಗದ ಸಹಜ ಸುಂದರ ಸರಳ ಜೀವನ ಕಲೆಯ ಪ್ರಕ್ರಿಯೆ.

ದೈವಿಕ ಆಹಾರ, ಧ್ಯಾನ, ಸಹಜ ರಾಜಯೋಗಗಳ ಬೆಂಬಲದಿಂದ ಈ ಪೃಥ್ವಿಯಲ್ಲಿ ಯಾರು ಬೇಕಾದರೂ ವಿಶ್ವಪರಿವರ್ತನೆಯ ಅಂತರಾರೋಹಣ ಮಾಡಬಲ್ಲರು. ತನ್ನ ಅರಿವು ತನಗೇ ಗುರು. ನನಗೆ ನಾನೇ ದೀಪ. ಈ ನಿಟ್ಟಿನಲ್ಲಿ ಸಾಗಿದರೆ ಸಂತೆ-ಚಿಂತೆಗಳ ಕಂತೆಯಾಗಬೇಕಿದ್ದ ವೃದ್ಧಾಪ್ಯ ಸುಂದರ ಶಿವಾಲಯವಾಗಬಲ್ಲುದು. ಅಂತರಂಗದ ಅರುಹಿನ ಹೂದೋಟವಾಗಬಲ್ಲುದು. ಬದುಕಿನ ಶಿಸ್ತು ಬರಲಿರುವ ಸುಸ್ತನ್ನು ಶಕ್ತಿಶಾಲಿ ಮಾಡಬಲ್ಲುದು. ಇದಕ್ಕೆ ದುಡ್ಡು-ದಮ್ಮಡಿ ಬೇಕಾಗಿಲ್ಲ. ಕಾಸು-ಕಾಂಚಾಣವಿಲ್ಲದೇ ಕಾಂಚನ ಕಾಯ ಗೈಯುವ ದಾರಿ ಎಷ್ಟು ಸುಂದರ !

ಅಂತರಂಗದ ಆತ್ಮಚೇತನಕ್ಕೆ ಮುಪ್ಪಿನ ಚಿಪ್ಪು ಇಲ್ಲ. ಆತ್ಮ ನಿರಂತರ ಗಾನತರಂಗ. ಆತ್ಮದ ಮಲಿನತೆಯೇ ದೇಹದ ಜಾಡ್ಯ, -ಜಡ್ಡು- ಜಿಡ್ಡು ! ಆತ್ಮನ ಸುಂದರ ಅರುಹಿನ ತೋರಣವೇ ಬದುಕಿನ ಸಂಸ್ಕೃತಿಯ ಹೂರಣ. ಆತ್ಮನ ಮರವೆಯೇ ಅನಾತ್ಮ ಕಾರಕವಾದ ಅಹಂಕಾರ, ಮೋಹ, ಮಾಯೆ, ಈರ್ಷೆ, ದ್ವೇಷ, ಅಸೂಯೆ, ದುರಾಶೆ, ಘರ್ಷಣೆ. ಇವನ್ನು ಇಂದಿನ ರಾಜಕಾರಣದಲ್ಲಿ ಹಾಗೂ ಲಾಭಬಡುಕ ವ್ಯವಹಾರದಲ್ಲಿ ನಾವು ನಿಚ್ಚಳವಾಗಿ ಕಾಣಬಲ್ಲೆವು. ಆತ್ಮಜ್ಞಾನವೇ ಜಾಗತಿಕ ಶಾಂತಿಗೆ ಆದಿ ಆಧಾರ. ಆಚಾರವೇ ಸ್ವರ್ಗ. ಅನಾಚಾರವೇ ನರಕ.

ನೆನಪಿಡಿ..... ಮುಪ್ಪು ಪಂಚತತ್ತ್ವದ ಒಂದು ಸಹಜ ಕ್ರಿಯೆ ಮಾತ್ರ ! ನಾವೆಲ್ಲ ನಿಲ್ಲದ ಆತ್ಮಯಾತ್ರಿಗಳು ! ಆತ್ಮಕ್ಕೆ ಮುಪ್ಪು , ಮರಣ, ಜಡ್ಡುಗಳ ಬಂಧನವಿಲ್ಲ. ಇದೇ ಜ್ಞಾನ. ''ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯಾ.... ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯಾ..... !!''

ಹೌದು! ನಾವೆಲ್ಲರೂ ಮುಪ್ಪನ್ನು ಗೌರವದಿಂದ ಸ್ವಾಗತಿಸೋಣ. ''ಶರಣರ ಗುಣ ಮರಣದಲ್ಲಿ ನೋಡು!'' ಪ್ರಕೃತಿಯ ವಿರುದ್ಧ ಈಜುವುದು ಬೇಡ. ಪ್ರಕೃತಿಯಲ್ಲಿ ವಿಕೃತಿ ಕಳೆದ ಕಲೆಯೇ ಸುಂದರ ಶಿವಯೋಗ !!


***Statement about ownership and other particulars about Viveka Prabha (according to Form IV Rule 8, circulated by Registrar of Newspapers for India)***

| | |
|---|---|
| 1. Place of Publication | : **Mysore 570 020** |
| 2. Periodicity of Publication | : **Monthly** |
| 3. Printer's Name | : **Swami Atmajnananda** |
| Nationality | : **Indian** |
| Address | : **Adhyaksha, Sri Ramakrishna Ashrama, Yadavagiri, Mysore 570 020** |
| 4. Publisher's Name | : **Swami Atmajnananda** |
| Nationality | : **Indian** |
| Address | : **Adhyaksha, Sri Ramakrishna Ashrama, Yadavagiri, Mysore 570 020** |
| 5. Editor's Name | : **Swami Jnanayogananda** |
| Nationality | : **Indian** |
| Address | : **Sri Ramakrishna Ashrama Yadavagiri Mysore 570 020** |
| 6. Name & Addresses of the individuals who own the newspaper and partners or share-holders holding more than 1% of the capital | : **Adhyaksha, Sri Ramakrishna Ashrama, Yadavagiri Mysore 570 020** |

**I, Swami Atmajnananda, hereby declare that the particulars given above are true to the best of my knowledge and belief.**

*sd.*
*Swami Atmajnananda*
01.03.2018 Signature of the publisher



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: ಸ್ವಾಮಿ ಶ್ರದ್ಧಾನಂದ

ಅನುವಾದ: ಪ್ರವ್ರಾಜಿಕಾ ಯೋಗಾತ್ಮಪ್ರಾಣಾ

## ಭಾಗ ೧೫

**ಮಾ**ರನೇ ದಿನ ಬಿದ್ದಿದ್ದ ೧೨ ಇಂಚು ಮಂಜಿನ ಮೇಲೆ ನಡೆಯುತ್ತ ಎಲ್ಲರೂ ಹೊರಟರು. ಹಿಂದಿನ ದಿನದಂತೆ ಮತ್ತೆ ಏನಾದರೂ ಜರುಗಿ ತಡವಾಗದಿರಲೆಂದು ಕಾಳೀಕೃಷ್ಣರು ಸ್ವಾಮೀಜಿಯವರ ದಂಡಿಯ ಜೊತೆಜೊತೆಗೇ ನಡೆದರು. ಹಿಮಾವೃತ ಪರ್ವತ, ವೃಕ್ಷರಾಶಿಯ ಶೋಭೆ ಇವನ್ನು ಕಂಡು ಸ್ವಾಮೀಜಿ ಪ್ರಫುಲ್ಲಗೊಂಡರು. ಅಂದಿನ ರಾತ್ರಿಯನ್ನು 'ಮೌರ್‌ನಲ್ಲಾ' ಪ್ರವಾಸಿ ಮಂದಿರದಲ್ಲಿ ಕಳೆದರು. ಸ್ವಾಮಿ ಸದಾನಂದರು ಹಿಂದಿನ ದಿನವೇ ಎಲ್ಲರಿಗಿಂತ ಮೊದಲು ಪ್ರವಾಸಿ ಮಂದಿರ ತಲುಪಿ, ಸ್ವಾಮೀಜಿಯವರಿಗೆ ಏನೂ ತೊಂದರೆಯಾಗದಂತೆ ಎಲ್ಲವನ್ನೂ ಅಣಿ ಮಾಡಿದ್ದರು. ಸ್ವಾಮೀಜಿಯವರು ಹಿಂದಿನ ರಾತ್ರಿ ಆ ಗುಡಿಸಲಂಗಡಿಯಲ್ಲಿ ಪಡೆದ ಅನುಭವವನ್ನು ಇಲ್ಲಿ ರಸವತ್ತಾಗಿ ವರ್ಣಿಸಿದರು.

ನಾಲ್ಕನೇ ದಿನ ಮಂಜು ಬಹಳಷ್ಟು ಕರಗಿತ್ತು. ೨೧ ಮೈಲಿ ಪ್ರಯಾಣಿಸಿದ ನಂತರ 'ಧೂನಾಘಾಟ್' ಎಂಬಲ್ಲಿ ಎಲ್ಲರೂ



ದಕ್ಷಿಣೇಶ್ವರದ ಪಂಚವಟಿಯಲ್ಲಿ ಸ್ವಾಮಿ ವಿರಜಾನಂದರು

ವಿಶ್ರಮಿಸಿದರು. ಕೊನೆಗೆ ಸ್ವಾಮೀಜಿಯವರು ದಾರಿಯ ಸ್ವಲ್ಪ ಭಾಗವನ್ನು ಊರುಗೋಲು ಹಿಡಿದು, ಕಾಳೀಕೃಷ್ಣರ ಹೆಗಲನ್ನು ಆಸರೆಯಾಗಿ ಪಡೆದು ನಡೆಯತೊಡಗಿದರು. ''ಮೊದಲು ೨೦-೨೫ ಮೈಲಿಯಷ್ಟು ನಡೆಯುವುದು ಲೆಕ್ಕಕ್ಕೇ ಇರುತ್ತಿರಲಿಲ್ಲ! ನೋಡು! ಈಗ ಎಷ್ಟು ದುರ್ಬಲನಾಗಿಬಿಟ್ಟಿದ್ದೇನೆ! ಇಷ್ಟು ದೂರ ನಡೆಯಲೂ ಸಹ ಕಷ್ಟವಾಗುತ್ತಿದೆ'' ಎಂದು ಕಾಳೀಕೃಷ್ಣನಿಗೆ ಹೇಳಿ, ಸ್ವಲ್ಪ ಹೊತ್ತಿನ ನಂತರ ''ನೋಡು ಮಗು, ನಾನೀಗ ಜೀವನದ ಅಂತ್ಯವನ್ನು ಸಮೀಪಿಸುತ್ತಿದ್ದೇನೆ'' ಎಂದರು. ಇದನ್ನು ಕೇಳಿದ ಸ್ವಾಮಿ ವಿರಜಾನಂದರು ಆತಂಕಗೊಂಡರು. ನಿಜವಾಗಿಯೂ ಸ್ವಾಮೀಜಿಯವರ ಶರೀರ ಅತ್ಯಂತ ದುರ್ಬಲವಾದಂತೆ ಕಂಡು ಬರುತ್ತಿತ್ತು. ಮಾರನೇ ದಿನ (೩ನೇ ಜನವರಿ, ೧೯೦೧) ಎಲ್ಲರೂ ಮಾಯಾವತಿಯನ್ನು ತಲುಪಿದರು. ಸ್ವಾಮೀಜಿಯವರು ಮಾಯಾವತಿಯಲ್ಲಿ ಇದ್ದಷ್ಟು ದಿನವೂ, ಎಲ್ಲರ ಆನಂದೋತ್ಸಾಹಗಳಿಗೆ ಮಿತಿಯೇ ಇರಲಿಲ್ಲ. ದುಃಖದಲ್ಲಿ ಮುಳುಗಿದ್ದ ಮಿಸೆಸ್ ಸೇವಿಯರ್ ಕೂಡ ಸ್ವಾಮೀಜಿಯವರ ಸಂಸರ್ಗದಿಂದ ಶಾಂತಿ-ಸಮಾಧಾನಗಳನ್ನು ಪಡೆದರು. ಸ್ವಾಮೀಜಿಯವರು ಅಲ್ಲಿ ತಮ್ಮ ಭವಿಷ್ಯ ಕಾರ್ಯಯೋಜನೆಗಳನ್ನು ವಿವರಿಸುತ್ತ ತನ್ಮಯರಾಗಿಬಿಡುತ್ತಿದ್ದರು. ಮಾಯಾವತಿ ಆಶ್ರಮದಿಂದ ಏನೇನು ಕಾರ್ಯಗಳು ಆಗಬೇಕೆಂದು ತಾವು ಬಯಸಿದ್ದರೋ ಅದನ್ನೆಲ್ಲ ಒಂದು ದಿನ ವಿವರಿಸಲಾರಂಭಿಸಿದರು. ಸ್ವರೂಪಾನಂದರು ತಾವು ಆ ಎಲ್ಲ ಕೆಲಸಗಳನ್ನು ಉತ್ಸಾಹದಿಂದ ನಿರ್ವಹಿಸಲು ಸಿದ್ಧರಿರುವುದಾಗಿಯೂ, ಆದರೆ ತಮ್ಮ ಸಹೋದ್ಯೋಗಿಗಳು ಕಡೇಪಕ್ಷ ಮೂರು ವರ್ಷ ತಮ್ಮೊಡನಿದ್ದು ಸಂಪೂರ್ಣ ಸಹಕಾರ ಕೊಡಬೇಕಾದುದು ತುಂಬ ಅಗತ್ಯವೆಂದೂ ತಿಳಿಸಿದರು. ಸ್ವಾಮೀಜಿಯವರು ಅಲ್ಲಿಯ ಸದಸ್ಯರನ್ನೆಲ್ಲ ಕರೆದು, ಅಲ್ಲಿದ್ದು ಸಹಕರಿಸಲು ಅವರೆಲ್ಲರೂ ಸಿದ್ಧರಿರುವರೇ ಇಲ್ಲವೇ ಎಂಬುದಾಗಿ ಪ್ರಶ್ನಿಸಿದರು. ಸ್ವಾಮಿ ವಿರಜಾನಂದರು ಮಾತ್ರ, ತಮಗೆ ಸ್ವಲ್ಪ ಕಾಲ ಏಕಾಂತದಲ್ಲಿದ್ದುಕೊಂಡು ಮಧುಕರಿ ಭಿಕ್ಷೆ ಮಾಡುತ್ತ ತಪಸ್ಸು ಮಾಡಲು ಇಚ್ಛೆಯಿದೆ ಎಂದು ಉತ್ತರಿಸಿದರು. ಸ್ವಾಮೀಜಿಯವರು ಆ ಇಚ್ಛೆಯನ್ನು ಪ್ರತಿರೋಧಿಸಿ, ''ಕಠೋರ ತಪಶ್ಚರ್ಯೆಯಿಂದ ಶರೀರವನ್ನು ಹಾಳು ಮಾಡಿಕೊಳ್ಳಬೇಡ. ನಾವು ಉಗ್ರ ತಪಸ್ಸನ್ನಾಚರಿಸಿ ನಮ್ಮ ಶರೀರ ಬಲಹೀನವಾಗಿರುವುದನ್ನು ನೀನು ನೋಡುತ್ತಿಲ್ಲವೇನು? ಅದರಿಂದ ಏನು ಪ್ರಯೋಜನ? ನಮ್ಮ ಅನುಭವಗಳಿಂದ ನೀವು ಪಾಠ ಕಲಿಯಿರಿ.

ಅದಲ್ಲದೆ, ಎಷ್ಟು ಹೊತ್ತು ನೀನು ಧ್ಯಾನ ಮಾಡಬಲ್ಲೆ? ಐದು ನಿಮಿಷವೆ? ಅಷ್ಟೇಕೆ, ಒಂದು ನಿಮಿಷವಾದರೂ ಮನಸ್ಸನ್ನು ಸ್ಥಿರಗೊಳಿಸಿದರೆ ಸಾಕು, ಬೇಕಾದಷ್ಟು. ಅದಕ್ಕಾಗಿ ಮುಂಜಾನೆ ಸಂಜೆ ಬಿಡದೆ ಸ್ವಲ್ಪ ಜಪ-ಧ್ಯಾನ ಮಾಡುವುದು ಆವಶ್ಯಕ. ಉಳಿದ ಸಮಯವನ್ನು ಶಾಸ್ತ್ರಾಧ್ಯಯನಾದಿಗಳಿಗೂ, ಲೋಕಹಿತ ಕಾರ್ಯಗಳಿಗೂ ವಿನಿಯೋಗಿಸಬೇಕು. ನನ್ನ ಶಿಷ್ಯರು ತಪಸ್ಸಿಗಿಂತ ಹೆಚ್ಚಾಗಿ ಕೆಲಸದ ಕಡೆ ವಾಲುವುದನ್ನು ನಾನು ಇಚ್ಛಿಸುತ್ತೇನೆ'' ಎಂದು ಅವರ ಮನವೊಲಿಸಲು ಯತ್ನಿಸಿದರು.

ಆದರೂ ಸ್ವಾಮಿ ವಿರಜಾನಂದರು ಶಾಂತರಾಗಿಯೇ ತಮ್ಮ ನಿಲುವನ್ನು ಸಮರ್ಥಿಸುತ್ತ, ''ಹೌದು ಸ್ವಾಮೀಜಿ, ನೀವು ಹೇಳುವುದು ಸತ್ಯವೇ ಆದರೂ ಚಾರಿತ್ರ್ಯ ಬಲ ಮತ್ತು ಆಧ್ಯಾತ್ಮಿಕ ಬಲವನ್ನು ಪಡೆಯಲು ತಪಸ್ಸಿನ ಆವಶ್ಯಕತೆ ಖಂಡಿತ ಇದೆ. ಅದಿಲ್ಲದೆ ನಿಷ್ಕಾಮಕರ್ಮವನ್ನು ಸರಿಯಾಗಿ ಮಾಡಲು ಸಹ ಸಾಧ್ಯವಿಲ್ಲ'' ಎಂದರು. ಅವರ ಈ ರೀತಿಯ ಹಠವನ್ನು ಕಂಡು ಸ್ವಾಮೀಜಿಯವರು ಕಾಳೀಕೃಷ್ಣರನ್ನು ಗದರಿಸಲಾರಂಭಿಸಿದರು. ಅಷ್ಟರಲ್ಲಿ ಸ್ವಾಮಿ ವಿರಜಾನಂದರು ಸ್ವಲ್ಪ ಅತ್ತ ಹೋಗುತ್ತಿದ್ದಂತೆಯೇ ಸ್ವಾಮೀಜಿಯವರು ಅಲ್ಲಿದ್ದವರಿಗೆ, ''ಕಾಳೀಕೃಷ್ಣನು ಹೇಳುತ್ತಿರುವುದು ಸರಿಯಾಗಿಯೇ ಇದೆ, ಧ್ಯಾನ-ಧಾರಣೆ ಹಾಗೂ ಸಂನ್ಯಾಸಿಯ ಮುಕ್ತ ಜೀವನಕ್ಕೆ ಇನ್ನಾವುದಾದರೂ ಹೋಲಿಕೆ ಇದೆಯೆ?'' ಎಂದರು. ಅಂತೂ ಕೊನೆಗೆ ಸ್ವಾಮಿ ವಿರಜಾನಂದರು ಸ್ವಾಮೀಜಿಯವರ ಇಚ್ಛಾನುಸಾರ ಮಾಯಾವತಿಯಲ್ಲಿದ್ದುಕೊಂಡು ಕೆಲಸ ಮಾಡುವುದೆಂದೇ ನಿಶ್ಚಯಿಸಿದರು.

ಆಗ ಚಳಿಗಾಲವಾದ್ದರಿಂದ ಮಾಯಾವತಿ ಆಶ್ರಮದ ಹತ್ತಿರದಲ್ಲೇ ಇದ್ದ ಒಂದು ಚಿಕ್ಕ ಸರೋವರದ ನೀರು ಹೆಪ್ಪುಗಟ್ಟಿತ್ತು. ಸ್ವಾಮಿ ವಿರಜಾನಂದರು ಒಂದು ದಿನ ಅಲ್ಲಿಂದ ಮಂಜನ್ನು ಸಂಗ್ರಹಿಸಿ ಒಂದು ದೊಡ್ಡ ಐಸ್ ಕ್ರೀಂ ಗಡ್ಡೆಯನ್ನು ತಯಾರಿಸಿದರು. ಸ್ವಾಮೀಜಿಯವರು ಅದನ್ನು ತುಂಬ ಆನಂದದಿಂದ ಸೇವಿಸಿದರು.

ಅದ್ವೈತ ಆಶ್ರಮದ ನಿಯಮದ ಪ್ರಕಾರ ಅಲ್ಲಿ ದ್ವೈತ ಉಪಾಸನೆಯು ನಿಷೇಧಿಸಲ್ಪಟ್ಟಿತ್ತು. ಆದರೂ ಕೆಲವು ಮಂದಿ ಸೋದರ ಸಂನ್ಯಾಸಿಗಳು ಒಂದು ಕೊಠಡಿಯಲ್ಲಿ ಶ್ರೀರಾಮಕೃಷ್ಣರ ಭಾವಚಿತ್ರವನ್ನಿಟ್ಟು, ಹೂಗಳಿಂದ ಅಲಂಕರಿಸಿ, ಧೂಪ-ದೀಪಾದಿ ಉಪಚಾರಗಳ ಸರಳ ಪೂಜೆಯನ್ನು ಪ್ರಾರಂಭಿಸಿದ್ದರು. ಇದು ಒಂದು ದಿನ ಸ್ವಾಮೀಜಿಯವರ ಕಣ್ಣಿಗೆ ಬಿತ್ತು. ಸ್ವಾಮೀಜಿಯವರು ಮದರ್ ಸೇವಿಯರ್ ಹಾಗೂ ಸ್ವರೂಪಾನಂದರನ್ನು ತರಾಟೆಗೆ ತೆಗೆದುಕೊಂಡರು. ಏಕೆಂದರೆ, ಇಲ್ಲಿ ಕೇವಲ ಅದ್ವೈತ ಭಾವದ ಚರ್ಚೆ, ಸಾಧನೆಯಷ್ಟೇ ನಡೆಯಬೇಕೆಂದು ನಿಶ್ಚಯಿಸಿರುವಾಗ ಈ ರೀತಿಯ ಪೂಜಾದಿಗಳು ನೀತಿಗೆ ವಿರುದ್ಧ. ಸ್ವಾಮಿ ವಿರಜಾನಂದರೇ ಈ ಪೂಜಾಗೃಹದ ಮುಖ್ಯ ಅರ್ಚಕರು! ಸ್ವಾಮೀಜಿಯವರ ಆಕ್ಷೇಪಣೆಯಿಂದ ಅವರು ತುಂಬ ಲಜ್ಜಿತರಾದರು. ಸ್ವಾಮೀಜಿಯವರು ಕೂಡಲೇ ಚಿತ್ರಪಟವನ್ನು ತೆಗೆದು ಪೂಜಾದಿಗಳನ್ನು ನಿಲ್ಲಿಸಿ ಬಿಡಲು ಹೇಳದಿದ್ದರೂ, ಅವರ ಇಂಗಿತವನ್ನರಿತುಕೊಂಡು ಮುಂದೆ ಆ ಪೂಜಾಗೃಹವನ್ನು ತೆರವು ಮಾಡಲಾಗಿತ್ತು.[೧]


ಅದ್ವೈತ ಆಶ್ರಮ, ಮಾಯಾವತಿ

ಒಂದು ದಿನ ಊಟ ತಡವಾಗುತ್ತಿದ್ದುದನ್ನು ಕಂಡು ಸ್ವಾಮೀಜಿಯವರು ಊಟದ ಜವಾಬ್ದಾರಿಯನ್ನು ಹೊತ್ತಿದ್ದ ಕಾಳೀಕೃಷ್ಣರನ್ನು ವಿಚಾರಿಸಿಕೊಳ್ಳಲು ಅಡುಗೆಮನೆಗೆ ಬಂದರು. ಅಲ್ಲಿ ಕಾಳೀಕೃಷ್ಣರು ಹೊಗೆಯಿಂದ ಆವೃತರಾಗಿ ಒಲೆ ಊದುತ್ತಿದ್ದುದನ್ನು ಕಂಡು ಸದ್ದಿಲ್ಲದೇ ಹಿಂದಿರುಗಿದರು. ಇದಾಗಿ ಎಷ್ಟೋ ಹೊತ್ತಿನ ನಂತರ ಸ್ವಾಮಿ ವಿರಜಾನಂದರು ಊಟ ತಂದಾಗ ಸ್ವಾಮೀಜಿಯವರು ಚಿಕ್ಕ ಬಾಲಕನಂತೆ ರೇಗಿ, ''ಹೋಗು! ತೆಗೆದುಕೊಂಡು ಹೋಗು, ನಾನೇನೂ ತಿನ್ನುವುದಿಲ್ಲ'' ಎಂದರು. ಸ್ವಾಮೀಜಿಯವರ ಬಾಲಕ ಸ್ವಭಾವವನ್ನು ತಿಳಿದಿದ್ದ ಸ್ವಾಮಿ ವಿರಜಾನಂದರು ಏನನ್ನೂ ಹೇಳದೆ ಸುಮ್ಮನೆ ನಿಂತರು. ಸ್ವಲ್ಪ ಹೊತ್ತಿನ ನಂತರ ಸ್ವಾಮೀಜಿಯವರು ತಾವಾಗಿಯೇ ಊಟ ಮಾಡಲಾರಂಭಿಸಿದರು. ಇದ್ದಕ್ಕಿದ್ದಂತೆ ಅವರ ಕೋಪ ಕರಗಿಹೋಯಿತು. ಅವರು ನಗುತ್ತ, ''ನನಗೇಕೆ ಅಷ್ಟು ಕೋಪ ಬಂದಿತ್ತೆಂದು ಈಗ ಅರ್ಥವಾಯಿತು; ನನಗೆ ತುಂಬ ಹಸಿವಾಗಿಬಿಟ್ಟಿತ್ತು, ಅದಕ್ಕೆ'' ಎಂದರು.

ಮತ್ತೆ ಮತ್ತೆ ಹಿಮಪಾತವಾಗುತ್ತಿದ್ದರಿಂದ ಸ್ವಾಮೀಜಿಯವರು ತಿರುಗಾಡಿ ಬರಲು ಹೊರಗೆ ಹೋಗಲಾಗುತ್ತಿರಲಿಲ್ಲ. ಹಗಲೂ ರಾತ್ರಿ ಕೋಣೆಯೊಳಗೆ ಕುಳಿತುಕೊಳ್ಳಬೇಕಾಗುತ್ತಿತ್ತು. ವಿಪರೀತ ಚಳಿ ಬೇರೆ. ಆದ್ದರಿಂದ ಮಾಯಾವತಿಯಿಂದ ಹೊರಡಲು ಅವಸರಿಸಿದರು. ಆದರೆ ಕೂಲಿಗಳನ್ನು ಹೊಂದಿಸಲು ಬಹಳ ಕಷ್ಟವಾಯಿತು. ಎರಡರಷ್ಟು ಮಜೂರಿ ಕೊಡುತ್ತೇನೆಂದರೂ ಸಹ ಅಷ್ಟು ದೂರ ಆ ಹಿಮದಲ್ಲಿ ದಂಡಿಯನ್ನು ಹೊರಲು, ಸಾಮಗ್ರಿಗಳನ್ನು ತಲುಪಿಸಲು ಯಾರನ್ನೂ ಒಪ್ಪಿಸಲಾಗಲಿಲ್ಲ. ಸ್ವಾಮಿ ವಿರಜಾನಂದರು ಒಂದು ದಿನ ನಗುತ್ತ, ''ಸ್ವಾಮೀಜಿ, ನೀವೇನೂ ಚಿಂತಿಸಬೇಡಿ. ಜನರು ಸಿಗದಿದ್ದರೆ ನಾವೇ ನಿಮ್ಮನ್ನು ದಂಡಿಯಲ್ಲಿ ಹೊತ್ತು ಕರೆದೊಯ್ಯು

---

[೧] ಮುಂದೊಮ್ಮೆ ಸ್ವಾಮಿ ವಿಮಲಾನಂದರು ದ್ವೈತ-ಅದ್ವೈತ ಈ ದ್ವಂದ್ವದ ವಿಷಯವಾಗಿ ಶ್ರೀಮಾತೆಯವರಿಗೆ ಪತ್ರವೊಂದನ್ನು ಬರೆದಿದ್ದರು. ಅದಕ್ಕೆ ಶ್ರೀಮಾತೆಯವರು ಜಯರಾಂಬಾಟಿಯಿಂದ ಹೀಗೆ ಪತ್ರ ಬರೆದಿದ್ದರು: ''...ಯಾರು ನಮ್ಮ ಗುರುವಾಗಿದ್ದಾರೆಯೋ ಅವರು ಸ್ವಯಂ ಅದ್ವೈತಿಯೇ ಆಗಿದ್ದಾರೆ. ನೀವುಗಳೆಲ್ಲರೂ ಅವರ ಶಿಷ್ಯರಾದ್ದರಿಂದ ನೀವೂ ಅದ್ವೈತಿಗಳೇ. ನಾನು ದೃಢವಾಗಿ ಹೇಳಬಲ್ಲೆ, ನೀವು ಅದ್ವೈತವಾದಿಗಳೆಂಬುದೇ ನಿಜ...'' *(ಸ್ವಾಮಿ ಸ್ವರೂಪಾನಂದರ ಡೈರಿಯಿಂದ, ೭-೯-೧೯೦೨).*

ತ್ತೇವೆ'' ಎಂದರು. ಅದಕ್ಕೆ ಸ್ವಾಮೀಜಿ, ''ಓಹೋ, ನೀವೆಲ್ಲ ಸೇರಿ ನನ್ನನ್ನು ಕಣಿವೆಗೆ ಎತ್ತಿಹಾಕಬೇಕೆಂದಿರುವಿರೇನು?'' ಎಂದು ನಕ್ಕರು.

ಅಂತೂ ಇಂತೂ ಕೂಲಿಗಳನ್ನು ಹೊಂದಿಸಲಾಯಿತು. ಈ ಬಾರಿ ಬೇರೆ ರಸ್ತೆ ಹಿಡಿದು, ಟನಕ್‌ಪುರ್ ಹಾಗೂ ಪಿಲಿಭಿತ್ ಮೂಲಕ ಪ್ರಯಾಣಿಸುವುದೆಂದು ನಿಶ್ಚಯಿಸಲಾಯಿತು. ಸ್ವಾಮೀಜಿಯವರು ಸ್ವಾಮಿ ಸದಾನಂದರನ್ನು ಕರೆದು, ''ನೋಡು, ಈ ಬಾರಿ ಪ್ರಯಾಣದ ಜವಾಬ್ದಾರಿಯೆಲ್ಲ ಕಾಳೀಕೃಷ್ಣನದೇ; ಎಂತಹ ಪರಿಸ್ಥಿತಿಯಲ್ಲೂ ಅವನ ತಲೆ ಬಿಸಿಯಾಗುವುದಿಲ್ಲ. ಅಲ್ಲದೆ, ಯಾವುದಕ್ಕೂ ಹುಯಿಲೆಬ್ಬಿಸುವುದಿಲ್ಲ. ಆದ್ದರಿಂದ ಅವನು ಹೇಗೆ ಹೇಳುತ್ತಾನೋ ಹಾಗೆಯೇ ನಾವೆಲ್ಲಾ ಕೇಳಬೇಕು'' ಎಂದರು.

ಎಲ್ಲರೂ ಮಾಯಾವತಿಯಿಂದ ಹೊರಟರು. ಸ್ವಾಮೀಜಿ ದಾರಿಯುದ್ದಕ್ಕೂ ತುಂಬ ಆನಂದದಿಂದಿದ್ದರು. ಅವರೆಲ್ಲ ಡಿವುರಿ ಪ್ರವಾಸ ಮಂದಿರದಲ್ಲಿ ಇಳಿದುಕೊಂಡಿದ್ದಾಗ ಅನ್ನ ಮಾಡಲು ಹೋಗಿ ಸ್ವಾಮಿ ವಿರಜಾನಂದರು ತುಂಬ ಪೇಚಿಗೆ ಸಿಲುಕಿದರು. ಏಕೆಂದರೆ ಬೇಯಿಸಲು ಹಾಕಿದ್ದ ಅಕ್ಕಿ, ಮಡಕೆಯ ಗಾತ್ರಕ್ಕಿಂತ ಹೆಚ್ಚಾಗಿಬಿಟ್ಟಿತ್ತು. ಅರ್ಧ ಬೆಂದಿರುವಾಗಲೇ ಅಕ್ಕಿ ಮಡಕೆಯ ಕಂಠಕ್ಕೆ ಬಂದು ಉಕ್ಕತೊಡಗಿತು! ಇತ್ತ ಸ್ವಾಮೀಜಿಯವರ ಊಟಕ್ಕೂ ತಡವಾಗುತ್ತಿದೆ. ಸ್ವಾಮಿ ವಿರಜಾನಂದರು ಕಿಂಕರ್ತವ್ಯತಾ ಮೂಢರಾಗಿ ನಿಂತಿದ್ದಾರೆ. ಇದ್ದಕ್ಕಿದ್ದಂತೆ ಸ್ವಾಮೀಜಿಯವರು ಅಲ್ಲಿಗೆ ಬಂದು ಪರಿಸ್ಥಿತಿಯನ್ನು ಗಮನಿಸಿ, ''ಒಂದು ಕೆಲಸ ಮಾಡಿ ನೋಡು. ಮಡಕೆಗೆ ಸ್ವಲ್ಪ ತುಪ್ಪ ಹಾಕಿ ಮುಚ್ಚಿಡು, ಸಲೀಸಾಗಿ ಅನ್ನವೂ ಆಗುತ್ತೆ, ತಿನ್ನಲೂ ಚೆನ್ನಾಗಿರುತ್ತೆ'' ಎಂದರು. ಸ್ವಾಮಿ ವಿರಜಾನಂದರು ಹಾಗೆಯೇ ಮಾಡಿದರು. ಸ್ವಾಮೀಜಿ ಹೇಳಿದ್ದು ನಿಜವೇ! ಅಂದು ಎಲ್ಲರೂ ಆನಂದದಿಂದ ಊಟ ಮಾಡಿದರು.

ಪಿಲಿಭಿತ್ ತಲುಪಿದ ಸ್ವಾಮೀಜಿಯವರಿಗೆ ಸ್ವಾಮಿ ವಿರಜಾನಂದರನ್ನು ಸ್ವಲ್ಪ ತಮಾಷೆ ಮಾಡೋಣ ಎಂದೆನ್ನಿಸಿತು. ದಂಡಿಯಿಂದ ಇಳಿದವರೇ, ''ಬಾ ನಿನಗೆ ಕುದುರೆ ಸವಾರಿ ಕಲಿಸಿಕೊಡ್ತೀನಿ'' ಎನ್ನುತ್ತ ಕುದುರೆಯ ಮೇಲೆ ಹೇಗೆ ಹತ್ತಬೇಕು, ಲಗಾಮು ಹೇಗೆ ಹಿಡಿಯಬೇಕು ಎಂಬಿತ್ಯಾದಿ ಕೆಲವು ಸಲಹೆಗಳನ್ನಿತ್ತು, ಕಾಳೀಕೃಷ್ಣರನ್ನು ಒಂದು ಕುದುರೆಯ ಮೇಲೆ ಕೂರಿಸಿದರು. ಅನಂತರ ತಾವೂ ಒಂದು ಕುದುರೆಯ ಮೇಲೇರಿ, ಚಾವಟಿಯಿಂದ ಅದನ್ನು ಜೋರಾಗಿ ಓಡಿಸುತ್ತ, ''ನೀನೂ ಹಾಗೆಯೇ ಮಾಡು'' ಎಂದರು. ಆದರೆ ಅಂತಹ ಆವಶ್ಯಕತೆಯೇನೂ ಬರಲಿಲ್ಲ. ಜೊತೆಯ ಕುದುರೆಯನ್ನು ನೋಡಿದ್ದೇ ತಡ, ಸ್ವಾಮಿ ವಿರಜಾನಂದರ ಕುದುರೆಯೂ ನಾಗಾಲೋಟದಿಂದ ಓಡತೊಡಗಿತು! ಪಾಪ, ಸ್ವಾಮಿ ವಿರಜಾನಂದರು ಕುದುರೆಯ ಕತ್ತು ಹಿಡಿದು ಹೇಗೋ ಕುಳಿತುಕೊಂಡಿದ್ದರು. ಎಲ್ಲರೂ ಈ ದೃಶ್ಯವನ್ನು ನೋಡಿ ಜೋರಾಗಿ ನಕ್ಕು ಆನಂದಿಸಿದರು.

ಪಿಲಿಭಿತ್‌ನಲ್ಲಿ ಸ್ವಾಮೀಜಿಯವರು ಟ್ರೈನನ್ನೇರಿದರು. ಸ್ವಾಮಿ ವಿರಜಾನಂದರು ಒಂದೆರಡು ದಿನ ಅಲ್ಲಿದ್ದು ನಂತರ ಮಾಯಾವತಿಗೆ ಹಿಂತಿರುಗಿದರು. ಸ್ವಾಮೀಜಿಯವರೊಡನೆ ಅವರದು ಇದೇ ಕೊನೆಯ ಭೇಟಿಯಾಯಿತು.

೧೦

ಹತ್ತೊಂಬತ್ತನೆ ಶತಮಾನಕ್ಕೆ ವಿದಾಯ ಹೇಳುವ ಮುನ್ನ ಸ್ವಾಮಿ ವಿರಜಾನಂದರಿಗೆ ವ್ಯಕ್ತಿಗತ ಆಘಾತವೊಂದು ಉಂಟಾಗಿತ್ತು. ತಂದೆ ತ್ರೈಲೋಕ್ಯನಾಥ ಬಸು ಗಯೆಯ ಹತ್ತಿರವಿದ್ದ ನವಾಡು ಎಂಬಲ್ಲಿಗೆ ಹವಾ ಬದಲಾವಣೆಗಾಗಿ ಹೋದರು. ಹಠಾತ್ತಾಗಿ ಅಲ್ಲೇ ಮೃತ್ಯುವಶರಾದರು ಎಂಬ ಸುದ್ದಿ ಮಾಯಾವತಿಯಲ್ಲಿದ್ದಾಗ ಕಾಳೀಕೃಷ್ಣರಿಗೆ ತಿಳಿದುಬಂತು. ಆಗ ಅವರಿಗೆ ಕೇವಲ ೫೧ ವರ್ಷವಾಗಿತ್ತಷ್ಟೆ. ತ್ರೈಲೋಕ್ಯನಾಥರು ಸತ್ಯನಿಷ್ಠರೂ, ತೇಜಸ್ವಿಯೂ, ಸಚ್ಚಾರಿತ್ರ್ಯವಂತರೂ, ಆದರ್ಶಪ್ರಿಯರೂ, ಮುಗ್ಧರೂ ಪರೋಪಕಾರಿಯೂ ಆಗಿದ್ದರು. ಅವರು ದುರ್ನೀತಿ-ದುರ್ಮಾರ್ಗವನ್ನೇನಾದರೂ ಅನುಸರಿಸಿದ್ದರೆ ಅಪಾರ ಸಂಪತ್ತಿಗೆ ಒಡೆಯನೂ ಆಗಬಹುದಿತ್ತು; ಆದರೆ ಅವರು ಪ್ರಲೋಭನೆಗೊಳಗಾಗದೆ, ಸನ್ಮಾರ್ಗದಿಂದ, ಸ್ವಾವಲಂಬನೆಯಿಂದ ಏನನ್ನು ಗಳಿಸುತ್ತಿದ್ದರೋ ಅಷ್ಟರಿಂದಲೇ ಸಂತೃಪ್ತರಾಗಿದ್ದರು. ಹಣಕ್ಕಾಗಿ ದುಡಿಯುತ್ತಿದ್ದುದಕ್ಕಿಂತ ಹೆಚ್ಚಾಗಿ ದರಿದ್ರರ, ಅಸಹಾಯಕ ರೋಗಿಗಳ ಉಚಿತ ಚಿಕಿತ್ಸೆಗಾಗಿ ಶ್ರಮಿಸುತ್ತಿದ್ದರು. ಹಿರಿಯ ಮಗನಾದ ಕಾಳೀಕೃಷ್ಣನಲ್ಲಿ ಅವರು ಬಹಳ ಭರವಸೆಯನ್ನಿಟ್ಟುಕೊಂಡಿದ್ದರು. ಆದರೆ ಅವನಲ್ಲಿ ತೀವ್ರ ವೈರಾಗ್ಯವನ್ನೂ ಆಧ್ಯಾತ್ಮಿಕ ಪಿಪಾಸೆಯನ್ನೂ ಕಂಡು ಅವನ ಹಾದಿಗೆ ಅಡ್ಡಬರಲಿಲ್ಲ. ಅಧ್ಯಾತ್ಮ ಪಥದಲ್ಲಿ ಸಾಗಲು ತಂದೆ ಅವನಿಗೆ ನೀಡಿದ ಉತ್ತೇಜನ ಮರೆಯುವಂತಹುದಲ್ಲ. ಎಂತಹ ತಂದೆ!

ತಂದೆಯವರ ಮೊದಲ ಶ್ರಾದ್ಧವಾದ ಕೆಲದಿನಗಳ ನಂತರ ತನ್ನ ತಾಯಿ ಸಂಸಾರದಿಂದ ದೂರವಿರಬೇಕೆಂಬ ಉದ್ದೇಶದಿಂದ ಬೃಂದಾವನಕ್ಕೆ ಹೋಗಿದ್ದಾರೆಂದು ಸ್ವಾಮಿ ವಿರಜಾನಂದರಿಗೆ ತಿಳಿದುಬಂತು. ಸಾಧನೆಗೈಯುತ್ತಾ ಅಲ್ಲಿಯೇ ಇದ್ದುಬಿಡಬೇಕೆಂದು ನಿಶ್ಚಯಿಸಿಕೊಂಡು ಹೋಗಿದ್ದರು. ಮೊದಲಿನಿಂದಲೂ ಸಂಸಾರದಲ್ಲಿ ಆಕೆ ಉದಾಸೀನಳೇ! ಹುಟ್ಟಿದ ಕೆಲವು ಮಕ್ಕಳನ್ನು ಕಳೆದುಕೊಂಡಿದ್ದರೂ, ಅದಕ್ಕಾಗಿ ಆಕೆ ಅತ್ತದ್ದನ್ನು ಯಾರೂ ಕಂಡಿರಲಿಲ್ಲ. ಒಮ್ಮೆ ಆಕೆ ತನ್ನ ಒಂದೂವರೆ ವರ್ಷ ವಯಸ್ಸಿನ ರೋಗಪೀಡಿತ ಮಗುವನ್ನು ಕರೆದುಕೊಂಡು ಖಗೇನ್‌ನ (ವಿಮಲಾನಂದ) ಮನೆ ಮಂದಿಯೊಂದಿಗೆ ಚೂಣಾರ್ ಎಂಬಲ್ಲಿಗೆ ಹವಾ ಬದಲಾವಣೆಗಾಗಿ ಹೋಗಿದ್ದರು. ಅಲ್ಲಿಯೇ ಕೆಲದಿನಗಳ ನಂತರ ಮಗುವು ಮೃತ್ಯುವಶವಾಯಿತು. ಖಗೇನನ ತಾಯಿ ಆ ಸಂದರ್ಭವನ್ನು ಹೀಗೆಂದು ವಿವರಿಸಿದ್ದರು: ''ಅಯ್ಯೋ ದೇವರೇ, ಅವರ ಮಗು ಸತ್ತುಹೋದದ್ದಕ್ಕಾಗಿ ನಾವೆಲ್ಲ ಅತ್ತೂ ಕರೆದೂ ಇಟ್ಟೆವು. ಆದರೆ ಮಗುವಿನ ತಾಯ ಕಣ್ಣಲ್ಲಿ ಒಂದು ತೊಟ್ಟೂ ನೀರಿರಲಿಲ್ಲ; ಏನೂ ಆಗಿಲ್ಲವೆಂಬಂತೆ ಅಚಲರಾಗಿದ್ದರು. ಅಂಥದ್ದನ್ನು ನಾನೆಲ್ಲಿಯೂ ನೋಡಿರಲಿಲ್ಲ!'' ಮಗ ಕಾಳೀಕೃಷ್ಣನು ಆಧ್ಯಾತ್ಮಿಕ ಪಥದಲ್ಲಿ ನಡೆಯಲು ಈಕೆ ಅದೆಷ್ಟೊಂದು ಸಹಕರಿಸಿದ್ದರು! ಎಂತಹ ತಾಯಿ!

*(ಮುಂದುವರಿಯುವುದು)*

# ಯುವಚೇತನ



## ಸ್ವಾಮೀಜಿ-ಶಿಷ್ಯ ಸಂವಾದ

**ಶಿಷ್ಯ:** ಪರಬ್ರಹ್ಮನ ಅಂಶವೇ ನಮ್ಮಲ್ಲೂ ಇದ್ದ ಪಕ್ಷಕ್ಕೆ ನಾವೇಕೆ ಆ ಆನಂದವನ್ನು ಪಡೆಯಲು ಹೋರಾಡುವುದಿಲ್ಲ? ನಾವೇಕೆ ಈ ಕ್ಷುದ್ರ ಕಾಮಿನಿ ಕಾಂಚನದ ಬಲೆಗೆ ಮೋಹಗೊಂಡು ಮೃತ್ಯುವಿನ ದವಡೆಗೆ ಪುನಃ ಪುನಃ ಓಡಿಹೋಗಿ ಬೀಳುತ್ತೇವೆ?

**ಸ್ವಾಮೀಜಿ:** ನೀನೀಗ ಹೇಳುತ್ತಿರುವುದು ಮನುಷ್ಯನು ಆ ಸಚ್ಚಿದಾನಂದದ ಸವಿಗೆ ಆಸೆ ಪಡುತ್ತಿಲ್ಲ ಎಂದು! ಗಾಢವಾಗಿ ಯೋಚಿಸು. ಯಾರಾದರಾಗಲಿ, ಅವನೇನನ್ನು ಮಾಡುತ್ತಿದ್ದಾನೆಯೋ ಅದನ್ನು ಸಚ್ಚಿದಾನಂದವನ್ನು ಪಡೆಯುವ ಆಸೆಯಿಂದಲೇ ಮಾಡುತ್ತಿದ್ದಾನೆಂದು ನಿನಗೆ ತಿಳಿಯುವುದು. ಆದರೆ ಎಲ್ಲರೂ ಅದನ್ನು ಅರಿತು ಮಾಡುತ್ತಿಲ್ಲ. ಅದಕ್ಕೇ ಅದನ್ನು ಅರ್ಥಮಾಡಿಕೊಳ್ಳಲಾರರು. ಬ್ರಹ್ಮನಿಂದ ಹಿಡಿದು ಹುಲ್ಲುಕಡ್ಡಿಯವರೆಗೆ ಎಲ್ಲದರಲ್ಲೂ ಸಚ್ಚಿದಾನಂದವು ಪೂರ್ಣವಾಗಿ ಇದ್ದೇ ಇದೆ. ನೀನೂ ಕೂಡ ಆ ಅಖಂಡ ಬ್ರಹ್ಮ. ನೀನು ನಿಜವಾಗಿಯೂ ಪ್ರಮಾಣವಾಗಿ ಹೀಗೆಂದು ತಿಳಿದುಕೊಂಡಲ್ಲಿ, **ಈ ಕ್ಷಣದಲ್ಲೆಯೇ ಅದನ್ನು ಸಾಕ್ಷಾತ್ಕರಿಸಿಕೊಳ್ಳಬಹುದು.** ಕೇವಲ ಸ್ಪಷ್ಟವಾದ ಅನುಭವ ಬೇಕಾಗಿದೆ. ನಿನ್ನ ಸತಿಸುತರಿಗಾಗಿ ಇಷ್ಟೊಂದು ಕಷ್ಟಪಟ್ಟು ಕೆಲಸ ಮಾಡುತ್ತಿರುವುದು ಕೂಡ ಅಂತ್ಯದಲ್ಲಿ ಆ ಸಚ್ಚಿದಾನಂದ ಬ್ರಹ್ಮನನ್ನು ಪಡೆಯುವುದಕ್ಕಾಗಿಯೆ. ಬಾರಿಬಾರಿಗೂ ಮಾಯೆಯ ಜಟಿಲ ತೊಡಕಿನಲ್ಲಿ ಸಿಕ್ಕಿ ದುಃಖ ಕೋಟಲೆಗಳ ಪೆಟ್ಟನ್ನು ತಿಂದಾಗ ತನ್ನಷ್ಟಕ್ಕೆ ತಾನೇ ಮನಸ್ಸು ತನ್ನ ನಿಜಸ್ವರೂಪವಾದ ಆತ್ಮನ ಕಡೆ ತಿರುಗುತ್ತದೆ. ನಮ್ಮ ಹೃದಯದಲ್ಲಿರುವ ಈ ಸಚ್ಚಿದಾನಂದವನ್ನು ಪಡೆಯುವ ಆಸೆ ಇರುವುದರಿಂದಲೇ ಮಾನವನು ಒಂದಾದ ಮೇಲೊಂದು ಪೆಟ್ಟನ್ನು ತಿಂದು ತನ್ನ ಕಣ್ಣನ್ನು ಅಂತರಂಗದ ಕಡೆ ತಿರುಗಿಸುವನು. ಪ್ರತಿಯೊಬ್ಬರಿಗೂ ತಪ್ಪದೆ ಒಂದಲ್ಲ ಒಂದು ಸಾರಿ ಈ ಸ್ಥಿತಿ ಬಂದೇ ಬರುವುದು. ಆಗ ಅವನು ಇದನ್ನು ಮಾಡುವನು. ಒಬ್ಬನಿಗೆ ಈ ಜನ್ಮದಲ್ಲೇ ಬರಬಹುದು. ಇನ್ನೊಬ್ಬನಿಗೆ ಸಾವಿರಾರು ಜನ್ಮಗಳಾದ ನಂತರ ಬರಬಹುದು.

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೮, ಪು.೧೫೯)*



**ಶ್ರೀಮಾತೆಯವರ ಉಪದೇಶಗಳು**

**ಶಿಷ್ಯ:** ಎಲ್ಲವೂ ಕರ್ಮಕ್ಕೆ ಅನುಸಾರವಾಗಿ ಆಗುವುದೆ ?

**ಶ್ರೀಮಾತೆ:** ಕರ್ಮವಲ್ಲದಿದ್ದರೆ ಇನ್ನೇನು? ನೋಡು, ಆ ತೋಟಿಯವನು ಮಲದ ತೊಟ್ಟಿಯನ್ನು ಹೊತ್ತುಕೊಂಡು ಹೋಗುತ್ತಿದ್ದಾನೆ.

**ಶಿಷ್ಯ:** ಮನುಷ್ಯನಿಗೆ ಒಳ್ಳೆಯ, ಕೆಟ್ಟ ಪ್ರವೃತ್ತಿಗಳು ಆರಂಭವಾದುದು ಎಲ್ಲಿಂದ? ಈ ಜನ್ಮಕ್ಕೆ ಅದಕ್ಕೂ ಹಿಂದಿನ ಜನ್ಮದ ಕರ್ಮ ಕಾರಣ ಅಂತ ನೀವು ಹೇಳಬಹುದು. ಆದರೆ ಎಲ್ಲಕ್ಕೂ ಆದಿ ಯಾವುದು ?

**ಶ್ರೀಮಾತೆ:** ಭಗವಂತನ ಇಚ್ಛೆಯಿಲ್ಲದೆ ಯಾವುದೂ ಸಾಧ್ಯವಾಗದು; ಒಂದು ಹುಲ್ಲು ಕಡ್ಡಿಯೂ ಅಲುಗಾಡದು. ಜೀವಕ್ಕೆ ಸುಸಂದರ್ಭ ಬಂದಾಗ ಧ್ಯಾನ ಮಾಡುವ ಅವಕಾಶ ಒದಗುವುದು. ಭಗವಂತನ ಇಚ್ಛೆ ಯಾವುದೋ ಅದನ್ನು ತಕ್ಕ ಸಮಯದಲ್ಲಿ ಅವನು ಮನುಷ್ಯನ ಕರ್ಮದ ಮೂಲಕ ಪ್ರಕಟಗೊಳಿಸುತ್ತಾನೆ. ನರೇನ್‌ಗೆ ಏನು ಸಾಧ್ಯವಿತ್ತು? ಭಗವಂತ ಅವನ ಮೂಲಕ ಕೆಲಸ ಮಾಡಿದ್ದರಿಂದಲೇ ಅವನು ಇವೆಲ್ಲವನ್ನೂ ಮಾಡಲು ಸಾಧ್ಯವಾಯಿತು. ಶ್ರೀರಾಮಕೃಷ್ಣರು ಏನನ್ನು ಮಾಡುವರೋ ಅದೆಲ್ಲವನ್ನೂ ಆಗಲೇ ನಿರ್ಧರಿಸಿಬಿಟ್ಟಿದ್ದಾರೆ. ಯಾರು ಅವರ ಮೇಲೆ ತಮ್ಮೆಲ್ಲ ಭಾರವನ್ನೂ ಒಪ್ಪಿಸಿಬಿಡುವರೋ, ಅವರ ಎಲ್ಲವನ್ನೂ ಅವರೇ ನೋಡಿಕೊಳ್ಳುವರು. ಎಲ್ಲವನ್ನೂ ಸಹಿಸಿಕೊಳ್ಳಬೇಕು. ಏಕೆಂದರೆ, ಕರ್ಮಕ್ಕೆ ತಕ್ಕಂತೆ ಎಲ್ಲವೂ ನಿರ್ಧರಿಸಲ್ಪಡುವುದು. ಅಂತೆಯೇ ಕರ್ಮದ ಮೂಲಕವೇ ಕರ್ಮ ಕತ್ತರಿಸಲ್ಪಡುವುದು.

**ಶಿಷ್ಯ:** ಕರ್ಮದ ಮೂಲಕ ಕರ್ಮ ಕತ್ತರಿಸಲ್ಪಡುವುದೆ ?

**ಶ್ರೀಮಾತೆ:** ಅಲ್ಲವೇ ಮತ್ತೆ ? ನೀನು ಒಂದು ಸತ್ಕಾರ್ಯವನ್ನು ಮಾಡಿದರೆ ಅದರಿಂದ ಪಾಪವೆಲ್ಲ ನಾಶವಾಗುವುದು. ಧ್ಯಾನ, ಜಪ, ಈಶ್ವರಚಿಂತನೆಗಳಿಂದ ಪಾಪ ಕತ್ತರಿಸಲ್ಪಡುವುದು.

**ಶ್ರೀಶಾರದಾದೇವಿ ವಚನವೇದದಿಂದ** *(ಪು.೧೫೫)*

# ಶ್ರೀ ಮಧ್ವಾಚಾರ್ಯರು

ಆಂಗ್ಲಮೂಲ: **ಸ್ವಾಮಿ ತಪಸ್ಯಾನಂದ** ಕನ್ನಡಕ್ಕೆ: **ಸ್ವಾಮಿ ವೀರೇಶಾನಂದ**

ಭಾಗ ೨

## ಮೊದಲ ದಕ್ಷಿಣಭಾರತ ತೀರ್ಥಯಾತ್ರೆ

ಉಡುಪಿ ಸುತ್ತಮುತ್ತ ಅವರಿಗೆ ಗೌರವ ಸಮ್ಮಾನಗಳು ದೊರೆತವು. ಇದರಿಂದ ಆಚಾರ್ಯರು ಉತ್ತೇಜಿತರಾಗಿ ಇನ್ನೂ ವಿಶಾಲವಾದ ಕಾರ್ಯಕ್ಷೇತ್ರಕ್ಕೆ ಕಾಲಿಟ್ಟರು. ಅಚ್ಯುತಪ್ರೇಕ್ಷರನ್ನೂ ಕರೆದುಕೊಂಡು, ಕನ್ಯಾಕುಮಾರಿಯ ಯಾತ್ರೆಯನ್ನು ಕೈಗೊಂಡರು. ವಿಷ್ಣುಮಂಗಲ ಎಂಬ ಹಳ್ಳಿಯಲ್ಲಿಯೇ ಅವರ ಮೊದಲ ವಾಸ್ತವ್ಯ. ಅಲ್ಲಿ ಪ್ರತಿವಾದಿ ಸಂಪ್ರದಾಯಗಳಿಗೆ ಸೇರಿದ್ದ ಬ್ರಾಹ್ಮಣರನ್ನು ವಾದದಲ್ಲಿ ಪರಾಜಯಗೊಳಿಸಿದರು. ಆ ಬ್ರಾಹ್ಮಣರು ಮಣಗಟ್ಟಲೆ ಬಾಳೆಯ ಗೊನೆಗಳನ್ನು ಭಿಕ್ಷೆಯಾಗಿ ನೀಡಿದರಂತೆ. ಯಾವ ಕಷ್ಟವೂ ಇಲ್ಲದೆ ಆಚಾರ್ಯರು, ಕಲ್ಪನೆಗೂ ಸಿಲುಕದಷ್ಟು ಹಣ್ಣುಗಳನ್ನು ಸೇವಿಸಿದರು. ಈ ಅದ್ಭುತ ಘಟನೆಯನ್ನು ನೋಡಿ ಎಲ್ಲರೂ ವಿಸ್ಮಿತರಾದರು. ಅನೇಕ ನೀರಿನ ತೊರೆಗಳನ್ನೂ ಹಾಗೆಯೇ ಅನೇಕ ದೇಶಗಳನ್ನೂ ಹಾದು ಹೋಗಿ, ಮಧ್ವರು ಪಯಸ್ವಿನೀ ನದಿಯ ದಡಕ್ಕೆ ಬರುತ್ತಾರೆ. ಅಲ್ಲಿಂದ ಅನಂತಪುರವನ್ನು ಸೇರುತ್ತಾರೆ. ಅಲ್ಲಿ ಅವರನ್ನು ಶಂಕರರ ಅದ್ವೈತ ಸಿದ್ಧಾಂತದಲ್ಲಿ ಪಾರಂಗತರಾದ ಹಲವು ವಿದ್ವಾಂಸರು ಎದುರಿಸಿದರು. ಅವರಲ್ಲಿ ಶೃಂಗೇರಿ ಶಂಕರ ಮಠದ ಅಂದಿನ ಮಠಾಧಿಪತಿಯಾಗಿದ್ದ ವಿದ್ಯಾತೀರ್ಥರೂ ಒಬ್ಬರು ಎಂದು ಹೇಳುತ್ತಾರೆ. ಬಹಳ ಬಿಸಿಬಿಸಿಯಾದ ವಾಗ್ಯುದ್ಧವೇ ಅವರಿಬ್ಬರ ನಡುವೆ ನಡೆದು ಹೋಯಿತು. ತನ್ನ ಎದುರಾಳಿಯ ಮೇಲಿನ ಮಹಾಕೋಪದಲ್ಲಿ ವಿದ್ಯಾತೀರ್ಥರು, ಮಧ್ವರ ದಂಡವನ್ನು ಮುರಿಯುತ್ತೇನೆ ಎಂದು ಬೆದರಿಕೆ ಹಾಕಿದರಂತೆ. ಸಂನ್ಯಾಸಿಗಳಿಗೆ ದಂಡ ಒಂದು ಪ್ರಮುಖವಾದ ಚಿಹ್ನೆ. ನಂತರ ಮಧ್ವರು ಕನ್ಯಾಕುಮಾರಿಯಲ್ಲಿ ಸಾಗರಸ್ನಾನವನ್ನು ಮಾಡಿದರು. ಶ್ರೀರಂಗಂ ಮುಂತಾದ ತಮಿಳು ದೇಶದಲ್ಲಿರುವ ಹಲವಾರು ದೇವಸ್ಥಾನಗಳಿಗೆ ಭೇಟಿಕೊಟ್ಟರು. ಎತ್ತ ಹೋದರೂ ಸಾಮಾನ್ಯ ಜನರ ಬಹು ದೊಡ್ಡ ಗುಂಪು ಅವರನ್ನು ಎದುರುಗೊಳ್ಳುತ್ತಿತ್ತು. ಅವರ ಗಂಭೀರ ನಡೆ ನುಡಿಗಳಿಂದ ಜನರು ಆಕರ್ಷಿತರಾಗುತ್ತಿದ್ದರು. ಪಂಡಿತರು ಅವರ ಅಗಾಧ ಪಾಂಡಿತ್ಯವನ್ನು ಕಂಡು ವಿಸ್ಮಯಗೊಳ್ಳುತ್ತಿದ್ದರು. ಒಂದು ಸಭೆಯಲ್ಲಿ ಶಾಸ್ತ್ರಗಳ ವ್ಯಾಖ್ಯಾನ ಮಾಡುವಂತೆ ವಿದ್ವಾಂಸರು ಅವರಿಗೆ ಸವಾಲು ಹಾಕಿದರು. ಮಧ್ವರು ವೈದಿಕ ಸೂಕ್ತಗಳಲ್ಲಿ ಪ್ರತಿಯೊಂದಕ್ಕೂ ಮೂರು ಅರ್ಥಗಳಿವೆ ಎಂಬುದನ್ನು ನಿದರ್ಶನದೊಂದಿಗೆ ತೋರಿಸಿಕೊಟ್ಟರು. ಹಾಗೆಯೇ ಮಹಾಭಾರತದ ಪ್ರತಿ ಶ್ಲೋಕಕ್ಕೆ ಹತ್ತು ಅರ್ಥಗಳಿರುವುದನ್ನೂ, ವಿಷ್ಣುಸಹಸ್ರನಾಮದ ಒಂದೊಂದು ನಾಮಕ್ಕೂ ನೂರು ಅರ್ಥಗಳಿರುವುದನ್ನೂ ಉದಾಹರಣೆಗಳೊಂದಿಗೆ ಪ್ರದರ್ಶಿಸಿದರು. ಹೀಗೆ ದಕ್ಷಿಣ ದೇಶಗಳ ಪಂಡಿತರಿಂದ ಸನ್ಮಾನವನ್ನು ಪಡೆದು, ಉಡುಪಿಗೆ ಮರಳಿ ಬಂದರು. ಶಂಕರ ಮತ್ತು ರಾಮಾನುಜ ಸಂಪ್ರದಾಯಗಳಿಗೆ ಸೇರಿದ ಹಲವಾರು ಪಂಡಿತರ ಜೊತೆಗೆ ನಡೆಸಿದ ವಾದವಿವಾದಗಳಿಂದ ಒಂದಂತೂ ಅವರಿಗೆ ಅರಿವಾಯಿತು. ಆ ಪ್ರಕಾರ, ತಮ್ಮದೇ ಆದ ವೇದಾಂತ ತಾತ್ತ್ವಿಕ ಸಂಪ್ರದಾಯವನ್ನು ಹುಟ್ಟುಹಾಕಬೇಕು ಎಂದು ಅವರು ನಿಶ್ಚಯಿಸಿದರು.

## ಬದರೀಧಾಮದ ಕಡೆಗೆ ತೀರ್ಥಯಾತ್ರೆ

ಉಡುಪಿಯಲ್ಲಿ ಕೆಲಸಮಯ ಕಳೆದು ಆಚಾರ್ಯರು, ತಮ್ಮ ಗುರುಗಳ ಅನುಮತಿ ಪಡೆದು ಬದರೀಯಾತ್ರೆಯನ್ನು ಆರಂಭಿಸಿದರು. ಅವರೊಡನೆ ಕೆಲವು ಶಿಷ್ಯರನ್ನೂ ಕರೆದುಕೊಂಡು ಹೋದರು. ಹಲವು ಪವಿತ್ರಕ್ಷೇತ್ರಗಳನ್ನು ಮತ್ತು ಪವಿತ್ರ ತೀರ್ಥಗಳನ್ನು ಹಾದುಹೋದರು. ಕಡೆಗೆ ಬದರಿಕಾಶ್ರಮವನ್ನು ಸೇರಿದರು. ಈ ಸ್ಥಳವು ಭಗವಾನ್ ನಾರಾಯಣನಿಗೆ ಅತ್ಯಂತ ಪ್ರಿಯವಾದದ್ದು. ಅಲ್ಲಿ ಅವರು ಭಗವದ್ಗೀತೆಯ ಮೇಲೆ ಬರೆದ ಭಾಷ್ಯವನ್ನು ಭಗವಾನ್ ಶ್ರೀವ್ಯಾಸದೇವರಿಗೆ ಸಮರ್ಪಿಸಿದರು. ಅದನ್ನು ತಮ್ಮ ಶಿಷ್ಯರಿಗೆ ಬೋಧಿಸಲು ಆರಂಭಿಸಿದರು. ಅಲ್ಲಿಯೇ ಘೋರ ತಪಸ್ಸನ್ನು ಕೈಗೊಳ್ಳಲು ಸಂಕಲ್ಪಮಾಡಿದರು. ಕೊರೆಯುವ ನದಿ ನೀರಿನಲ್ಲಿ ಸ್ನಾನ ಮಾಡಿದರು; ಉಪವಾಸ ಮಾಡಿದರು; ದೀರ್ಘಕಾಲ ಧ್ಯಾನವನ್ನು ಮಾಡಿದರು. ಕಡೆಗೆ ಅವರಿಗೆ ದುರ್ಗಮವಾದ



ವ್ಯಾಸರೊಂದಿಗೆ ಶ್ರೀ ಮಧ್ವಾಚಾರ್ಯರು

ಮೇಲಿನ ಬದರಿಗೆ ಬರುವಂತೆ ವ್ಯಾಸದೇವರಿಂದಲೇ ಆದೇಶ ಬಂತು. ಆಚಾರ್ಯರು ಬಹಳ ಕಠಿಣ ಮಾರ್ಗದಲ್ಲಿಯೇ ಮುಂದುವರಿದು ಅಲ್ಲಿಗೆ ತಲುಪಿದರು. ಅಲ್ಲಿ ಅವರಿಗೆ ಭಗವಾನ್ ವೇದವ್ಯಾಸರ ಸಾಕ್ಷಾತ್ ದರ್ಶನವಾಯಿತು. ವೇದವ್ಯಾಸರು ಅಲ್ಲಿ ತಮ್ಮ ಶಿಷ್ಯರೊಂದಿಗೆ ಅನಾದಿಕಾಲದಿಂದಲೂ ನಿರಂತರವಾಗಿ ನೆಲೆಸಿದ್ದಾರೆ. ಆದರೆ ಸಾಧಾರಣ ಮನುಷ್ಯರಿಗೆ ಅವರು ಅಂತ ರ್ಧಾನರಾಗಿರುತ್ತಾರೆ. ಅಲ್ಲಿದ್ದ ವೇದವ್ಯಾಸರ ಶಿಷ್ಯರು, ಪೂರ್ಣ ಪ್ರಜ್ಞರು ಮುಖ್ಯಪ್ರಾಣದೇವರ ಅವತಾರವೆಂದು ವ್ಯಾಸದೇವ ರಿಂದಲೇ ತಿಳಿದುಕೊಂಡು, ಅವರಿಗೆ ಅಪಾರ ಗೌರವವನ್ನು ತೋರಿಸಿದರು. ವೇದವ್ಯಾಸರು ಅಪಾರ ವಾತ್ಸಲ್ಯದಿಂದ ಪೂರ್ಣ ಪ್ರಜ್ಞರನ್ನು ಆಲಂಗಿಸಿಕೊಂಡರು. ಅವರನ್ನು ಮಹರ್ಷಿಗಳ ಸಾಲಿನಲ್ಲಿ ಕೂಡಿಸಿದರು. ಪೂರ್ಣಪ್ರಜ್ಞರು ಮೇಲಿನ ಬದರಿ ಯಲ್ಲಿ ವಾಸ್ತವ್ಯ ಹೂಡಿದ ಸಮಯದಲ್ಲಿ ವೇದವ್ಯಾಸರು ಅವರಿಗೆ ವೇದ, ಬ್ರಹ್ಮಸೂತ್ರ, ಮಹಾಭಾರತಗಳ ಮತ್ತು ಪಾಂಚರಾತ್ರ ಆಗಮದ ನಿಜವಾದ ಅರ್ಥವನ್ನು ಉಪ ದೇಶಿಸಿದರು. ಅವೆಲ್ಲವೂ ನಾರಾಯಣನ ವಿಭೂತಿಯನ್ನೇ ಪ್ರತಿಪಾದಿಸುತ್ತವೆ ಎಂದು ಹೇಳಿ ಕೊಟ್ಟರು.

ಅಲ್ಲಿನ ಇನ್ನೊಂದು ಆಶ್ರಮದಲ್ಲಿ ಪೂರ್ಣಪ್ರಜ್ಞರು ಭಗ ವಾನ್ ನಾರಾಯಣ ಋಷಿಯ ದರ್ಶನವನ್ನು ಮಾಡಿದರು. ಭಗವಂತನು ತನ್ನ ಹಲವು ದಿವ್ಯಕಾರ್ಯಗಳನ್ನು ಕೈಗೊಳ್ಳಲು ತಳೆದ ಹಲವಾರು ಅವತಾರಗಳನ್ನು ಭಕ್ತಿಯಿಂದ ಧ್ಯಾನಮಾಡಿ ದರು. ''ವ್ಯಾಸರು ಆರಂಭಿಸಿದ ಜಗತ್ಕಲ್ಯಾಣ ಕಾರ್ಯವನ್ನು ಪೂರ್ಣಪ್ರಜ್ಞರೇ ಸಂಪನ್ನಗೊಳಿಸಲು ಸಾಧ್ಯ'' ಎಂಬ ನಾರಾ ಯಣನ ದಿವ್ಯವಾಣಿಯನ್ನು ಅಲ್ಲಿ ಅವರು ಕೇಳಿಸಿಕೊಂಡರು. ''ವೇದಾಂತಸೂತ್ರಗಳು, ಉಪನಿಷತ್ತುಗಳು ಮತ್ತು ಭಗವದ್ಗೀತೆ ಮುಂತಾದ ಪವಿತ್ರ ಗ್ರಂಥಗಳಿಗೆ ಇತರ ದುಷ್ಟ ಚಿಂತಕರು ತಪ್ಪಾಗಿ ವ್ಯಾಖ್ಯಾನ ಮಾಡಿದ್ದಾರೆ. ಈ ಶಾಸ್ತ್ರಗ್ರಂಥಗಳಿಗೆ ನೀವೇ ಸರಿ ಯಾದ ವ್ಯಾಖ್ಯಾನ ಮಾಡಬೇಕು'' ಎಂದು ಸಾಕ್ಷಾತ್ ನಾರಾ ಯಣನೇ ಆ ದಿವ್ಯವಾಣಿಯಲ್ಲಿ ಈ ಕಾರ್ಯಕ್ಕೆ ಪೂರ್ಣಪ್ರಜ್ಞ ರನ್ನು ನಿಯೋಜಿಸಿದನು. ಇದನ್ನು ಯೋಗ್ಯ ಜಿಜ್ಞಾಸುಗಳ ನಡುವೆ ಪ್ರಚಾರ ಮಾಡಬೇಕು ಎಂದೂ ಆದೇಶವಿತ್ತನು.

ಈ ಆದೇಶವನ್ನು ಪೂರ್ಣಪ್ರಜ್ಞರು ಶಿರಸಾವಹಿಸಿ ಪಾಲಿಸಿ ದರು. ಬದರೀಧಾಮದಲ್ಲಿಯೇ ವೇದಾಂತಸೂತ್ರಗಳಿಗೆ ಭಾಷ್ಯ ವನ್ನು ರಚಿಸಿದರು. ಅನಂತರ ಅವರು ದಕ್ಷಿಣಭಾರತಕ್ಕೆ ಹಿಂದಿರು ಗಿದರು. ಗೋದಾವರೀ ತಟದಲ್ಲಿನ ಒಂದು ಸ್ಥಳದಲ್ಲಿ ಅವರು ವಿವಿಧ ತಾತ್ತ್ವಿಕ ಶಾಖೆಗಳಿಗೆ ಸೇರಿದ ಹಲವಾರು ವಿದ್ವಾಂಸರೊಡನೆ ವಾದ ಮಾಡಿದರು. ಅವರೆಲ್ಲರನ್ನೂ ತಮ್ಮ ಅಲೌಕಿಕ ಮೇಧಾವಿ ತನದಿಂದ ಆಶ್ಚರ್ಯಚಕಿತರನ್ನಾಗಿಸಿದರು. ಅವರು **ಸರ್ವಜ್ಞ ಮೂರ್ತಿ**ಗಳೆಂಬ ಸನ್ಮಾನವನ್ನು ಗಳಿಸಿದರು. ಅವರು ಪರಾಜಯ ಗೊಳಿಸಿದ ಹಲವಾರು ಪ್ರಸಿದ್ಧ ವಿದ್ವಾಂಸರಲ್ಲಿ ಗೋದಾವರೀ ಪ್ರದೇಶದ ಶೋಭನ ಭಟ್ಟರು ಹಾಗೂ ಕಳಿಂಗ ದೇಶದ ಸ್ವಾಮಿ ಶಾಸ್ತ್ರಿಗಳು ಪ್ರಮುಖರಾದವರು. ಇವರಿಬ್ಬರೂ ಅನಂತರದ ದಿನ ಗಳಲ್ಲಿ ಉಡುಪಿಗೆ ತೆರಳಿ, ಮಧ್ವಾಚಾರ್ಯರ ಶಿಷ್ಯರಾಗಿ ಅವ ರಿಂದ ಸಂನ್ಯಾಸವನ್ನು ಸ್ವೀಕರಿಸಿದರು. ಆಚಾರ್ಯರಿಂದ ಕ್ರಮ ವಾಗಿ ಪದ್ಮನಾಭ ತೀರ್ಥ ಮತ್ತು ನರಹರಿ ತೀರ್ಥ ಎಂಬ ಸಂನ್ಯಾಸ ನಾಮಗಳನ್ನು ಪಡೆದುಕೊಂಡರು. ಕಾಲಾಂತರದಲ್ಲಿ ಅವರು ಮಧ್ವರ ಗ್ರಂಥಗಳಿಗೆ ವಿದ್ವತ್ಪೂರ್ಣವಾದ ಭಾಷ್ಯವನ್ನು ರಚಿಸಿ ದರು.

ಉಡುಪಿಗೆ ಮರಳಿದ ಆಚಾರ್ಯರು ಬ್ರಹ್ಮಸೂತ್ರಗಳಿಗೆ ತಾವು ರಚಿಸಿದ ನೂತನ ಭಾಷ್ಯವನ್ನು ತಮ್ಮ ಶಿಷ್ಯರಿಗೆ ವಿವರಿಸಿ ಹೇಳಿದರು. ಅಲ್ಲದೆ ತಮ್ಮ ಗುರು ಅಚ್ಯುತಪ್ರೇಕ್ಷರಿಗೂ ಇದನ್ನು ಹೇಳಿಕೊಟ್ಟರು. ಆದರೆ ತಮ್ಮ ಬಲವಾದ ಅದ್ವೈತ ಜ್ಞಾನದ ಹಿನ್ನೆಲೆಯ ಕಾರಣದಿಂದ, ಮಧ್ವಾಚಾರ್ಯರ ಈ ಹೊಸ ಭಾಷ್ಯಾರ್ಥವನ್ನು ಅರಗಿಸಿಕೊಳ್ಳುವುದು ಅಚ್ಯುತಪ್ರೇಕ್ಷರಿಗೆ ಬಹಳ ಕಷ್ಟವಾಯಿತು. ಹೀಗಿದ್ದರೂ ತಮ್ಮ ಅಪಾರ ವಿದ್ವತ್ತು ಮತ್ತು ಪ್ರಭಾವಯುತ ವ್ಯಕ್ತಿತ್ವಗಳಿಂದ ಮಧ್ವರು ತಮ್ಮ ಗುರುವಿನ ಮನಸ್ಸನ್ನು ಪರಿವರ್ತಿಸುವಲ್ಲಿ ಯಶಸ್ವಿಯಾದರು. ಹೀಗೆ ಗುರುವು ತಮ್ಮ ಅಸಾಧಾರಣ ಶಿಷ್ಯರ ವಿದ್ಯಾರ್ಥಿಯಾದರು. ಅಚ್ಯುತ ಪ್ರೇಕ್ಷರು ಮಧ್ವರನ್ನು ಮಠದ ಅಧಿಪತಿಯನ್ನಾಗಿ ನೇಮಿಸಿದರು. ಕೆಲವರ ಪ್ರಕಾರ, ಆಚಾರ್ಯರು ಉತ್ತರಭಾರತದ ಯಾತ್ರೆ ಕೈಗೊಳ್ಳುವುದಕ್ಕಿಂತ ಮುಂಚೆಯೇ ಈ ಘಟನೆ ನಡೆಯಿತು.

### ಉಡುಪಿಯಲ್ಲಿ ಶ್ರೀಕೃಷ್ಣ ಮಠದ ಸ್ಥಾಪನೆ ಮತ್ತು ನಂತರದ ಘಟನೆಗಳು

ಆಚಾರ್ಯರು ಉಡುಪಿಯಲ್ಲಿ ಇದ್ದಾಗ ಅವರ ಜೀವನದ ಅತ್ಯಂತ ಮಹತ್ವದ ಘಟನೆಯೊಂದು ಜರುಗಿತು. ಉಡುಪಿಯಲ್ಲಿ ಶ್ರೀಕೃಷ್ಣದೇವರ ಮಠವನ್ನು ಸ್ಥಾಪಿಸಿದ್ದೇ ಈ ಮಹಾನ್ ಘಟನೆ. ಒಮ್ಮೆ ಆಚಾರ್ಯರು ಸಮುದ್ರದ ದಂಡೆಯಲ್ಲಿ ಇದ್ದಾಗ ನಡೆದ ಅದ್ಭುತ ಘಟನೆಯೊಂದರಲ್ಲಿ, ಗೋಪೀಚಂದನ ಮೃತ್ತಿಕೆಯ ದೊಡ್ಡ ಉಂಡೆಯನ್ನು ಪಡೆದುಕೊಂಡರು. ಅದರ ಒಳಗೆ ಬಾಲ ಕೃಷ್ಣನ ಕಲ್ಲಿನ ವಿಗ್ರಹವೊಂದು ಇತ್ತು. ಆಚಾರ್ಯರು ಅದನ್ನು ಹತ್ತಿರವಿದ್ದ ಕೊಳದಲ್ಲಿ ತೊಳೆದು ಸ್ವಚ್ಛಗೊಳಿಸಿದರು. ಆಚಾರ್ಯರು ತಮ್ಮ ದಿವ್ಯಸ್ಪರ್ಶದಿಂದ ಈ ಮೂರ್ತಿಯಲ್ಲಿ ಶ್ರೀಕೃಷ್ಣನ ಸಾನ್ನಿಧ್ಯ ವನ್ನು ಆವಾಹಿಸಿದರು. ಹೀಗಾಗಿ ಇದನ್ನು ಮೂವತ್ತು ಜನರಿಗೆ ಕೂಡ ಎತ್ತಿ ಕೊಂಡೊಯ್ಯಲಾಗಲಿಲ್ಲವಂತೆ! ಮಧ್ವರು ಸರ್ವಶಕ್ತಿ ಮಂತರಾದ ವಾಯುದೇವರ ಅವತಾರವಷ್ಟೇ. ಆ ಮೂರ್ತಿ ಯನ್ನು ಅವರೊಬ್ಬರೇ ಅನಾಯಾಸವಾಗಿ ಎತ್ತಿಕೊಂಡು ಹೊರ ಟರು. ಮಠಕ್ಕೆ ನಡೆದುಕೊಂಡು ಹೋಗುವ ಮಾರ್ಗದಲ್ಲಿ ಪ್ರಸಿದ್ಧ ವಾದ ದಶಾವತಾರ ಸ್ತೋತ್ರವನ್ನು ರಚಿಸಿ, ಅದನ್ನು ಹಾಡಿಕೊಂಡೇ ಮುನ್ನಡೆದರು. ಈ ದ್ವಾದಶಸ್ತೋತ್ರದಿಂದಲೇ ಈ ದಿವ್ಯ ಮೂರ್ತಿಯ ಬಗ್ಗೆ ನಮಗೆ ಹಲವಾರು ವಿವರಗಳು ಲಭ್ಯವಾಗು



ಉಡುಪಿ ಶ್ರೀಕೃಷ್ಣನ ವಿಗ್ರಹ ಲಭಿಸಿತು

ತ್ತವೆ. ಈ ಮೂರ್ತಿಯನ್ನು ದ್ವಾಪರಯುಗದಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನೇ ಕೆತ್ತನೆ ಮಾಡಿದನು. ಇದನ್ನು ದ್ವಾರಕೆಯಲ್ಲಿ ಶ್ರೀ ಕೃಷ್ಣನ ದಿವ್ಯಪತ್ನಿಯಾದ ರುಕ್ಮಿಣೀದೇವಿಯೇ ಪೂಜಿಸುತ್ತಿದ್ದಳು.

ಉಡುಪಿಯಲ್ಲಿ ಶ್ರೀಕೃಷ್ಣನ ವಿಗ್ರಹವನ್ನು ಸ್ಥಾಪಿಸಿದ ಆಚಾರ್ಯರು, ಅನಂತರ ಯಜ್ಞಯಾಗಾದಿಗಳ ಆಚರಣೆಯಲ್ಲಿ ಮಹತ್ವದ ಸುಧಾರಣೆಯನ್ನು ಮಾಡಿದರು. ಅವುಗಳನ್ನು ಭಕ್ತಿ ಸಾಧನೆಯಲ್ಲಿ ಅಡಕಗೊಳಿಸಿದರು. ಒಬ್ಬ ಸ್ಥಳೀಯ ರಾಜನ ರಾಜಾಸ್ಥಾನದಲ್ಲಿ ಯಜ್ಞಾಚರಣೆಗಳಲ್ಲಿ ಸೋಮರಸ ಪಾನ ಮತ್ತು ಪ್ರಾಣಿಹಿಂಸೆಗಳನ್ನು ಪ್ರತಿಪಾದಿಸುತ್ತಿದ್ದ ಜರಘತೀತ ಎಂಬ ಒಬ್ಬ ದುಷ್ಟ ಬ್ರಾಹ್ಮಣನನ್ನು ವಾದದಲ್ಲಿ ಸೋಲಿಸಿದರು. ಹಿಟ್ಟು ಮತ್ತು ತುಪ್ಪದಿಂದ ಮಾಡಿದ ಪ್ರತಿಕೃತಿಗಳನ್ನು ಯಾಗದಲ್ಲಿ ಬಳಸುವ ಪದ್ಧತಿಯನ್ನು ಆರಂಭಿಸಿದರು. ಅತ್ಯಂತ ಪ್ರಾಚೀನ ಕಾಲದಲ್ಲಿ ವೈದಿಕ ಯಾಗಗಳಲ್ಲಿ ಪ್ರಾಣಿಬಲಿ ಇರಲೇ ಇಲ್ಲವೆಂದು ಆಚಾರ್ಯರು ಪ್ರತಿಪಾದಿಸಿದರು. ಇಂಥ ಸುಧಾರಣೆಗಳೊಂದಿಗೆ ಯಜ್ಞ ಮಾಡಲು ತಮ್ಮ ಸ್ವಂತ ತಮ್ಮನನ್ನು ಪ್ರೇರೇಪಿಸಿದರು.

## ಬದರಿಧಾಮಕ್ಕೆ ಎರಡನೆಯ ಯಾತ್ರೆ

ಮಧ್ವಾಚಾರ್ಯರು ಎರಡನೆಯ ಸಲ ಉತ್ತರಭಾರತಕ್ಕೆ ಯಾತ್ರೆ ಹೋದರು. ಆ ಸಮಯದಲ್ಲಿ ಬದರಿಕಾಶ್ರಮಕ್ಕೂ ಹೋದರು. ದಾರಿಯಲ್ಲಿ ಕಡಿದಾದ ಬೆಟ್ಟಗಳನ್ನು ಮತ್ತು ತುಂಬಿ ಹರಿಯುವ ನದಿಗಳನ್ನು ದಾಟುತ್ತ ಹೋದರು. ಈಶ್ವರದೇವ ಎಂಬ ಒಬ್ಬ ರಾಜನು ಆಳುತ್ತಿದ್ದ ಪ್ರದೇಶವನ್ನು ಹಾದು ಹೋದರು. ಆ ರಾಜನಿಗೆ ಕೆಟ್ಟದೊಂದು ಅಭ್ಯಾಸವಿತ್ತು. ದಾರಿಹೋಕರನ್ನೆಲ್ಲ ತಾನು ಕಟ್ಟಿಸುತ್ತಿದ್ದ ಕೆರೆಯ ಕೆಲಸ ಮಾಡಲು ಹೇಳುತ್ತಿದ್ದನು. ಆಚಾರ್ಯರಿಗೂ ಹಾಗೆಯೇ ಮಾಡಲು ತಿಳಿಸಿದನು. ಆಚಾರ್ಯರು ರಾಜನೇ ಹೇಗೆ ಅಗೆಯುವುದು ತೋರಿಸಿ ಕೊಡಬೇಕೆಂದು ಹೇಳಿದರು. ರಾಜನು ಉತ್ಸಾಹದಿಂದ ಗುದ್ದಲಿಯನ್ನು ತೆಗೆದುಕೊಂಡು ಅಗೆಯಲು ಆರಂಭಿಸಿದನು. ಅದನ್ನು ನಿಲ್ಲಿಸಲು ಅವನಿಗೆ ಆಗಲೇ ಇಲ್ಲ! ಆಚಾರ್ಯರ ಶಕ್ತಿಯ ಮುಂದೆ ಇವನ ಆಟ ನಡೆಯಲಿಲ್ಲ. ದಾರಿಯಲ್ಲಿ ಆಚಾರ್ಯರು ಅನೇಕ ಸಮಯಗಳಲ್ಲಿ ತಮ್ಮ ದೈಹಿಕ ಸಾಮರ್ಥ್ಯದ ಪ್ರದರ್ಶನವನ್ನು ಮಾಡಿದರು. ಅಲ್ಲದೆ ಕೆಲವು ಮಂದಿ ಕಳ್ಳರ ಗುಂಪು ಅವರ ಮೇಲೆ ಬಿದ್ದಾಗ ಮನಸ್ಸಿನ ಶಕ್ತಿಯಿಂದಲೇ ಅವರನ್ನು ತಡೆಗಟ್ಟಿದರು. ಒಮ್ಮೆ ಅವರು ಗಂಗೆಯನ್ನು ದಾಟುತ್ತಿದ್ದರು. ಯುದ್ಧದ ದಿನಗಳಾದ್ದರಿಂದ ಎಲ್ಲ ದೋಣಿಗಳ ಸಂಚಾರವನ್ನು ನಿಷೇಧಿಸಲಾಗಿತ್ತು. ಆ ಪ್ರದೇಶವನ್ನು ಮುಸ್ಲಿಂ ದೊರೆಯೊಬ್ಬನು ಆಳುತ್ತಿದ್ದನು. ''ಇವರು ಗೂಢಚಾರರು; ಕಳ್ಳವೇಷದಿಂದ ನದಿ ದಾಟುತ್ತಿದ್ದಾರೆ'' ಎಂಬ ಶಂಕೆ ಆ ಸೈನಿಕರಿಗೆ ಉಂಟಾಯಿತು. ಮಧ್ವಾಚಾರ್ಯರು ದೋಣಿಗಳಿಲ್ಲದೆಯೇ ನದಿಯನ್ನು ದಾಟಿಬಿಟ್ಟರು. ಅಲ್ಲಿ ಕಾಯುತ್ತಿದ್ದ ಸೈನಿಕರು ಆಚಾರ್ಯರ ವ್ಯಕ್ತಿತ್ವದಿಂದ ಮೋಹಿತರಾಗಿ ಸುಮ್ಮನೆ ನಿಂತುಬಿಟ್ಟರು. ತಮ್ಮ ಶಿಷ್ಯರೊಂದಿಗೆ ನದಿಯನ್ನು ದಾಟಿದ ಆಚಾರ್ಯರು ಸುಲ್ತಾನನ ಮುಂದೆ ನಿಂತರು. ಅವನೊಡನೆ ತುರ್ಕಿ ಭಾಷೆಯಲ್ಲಿ ಮಾತನಾಡಿದರು. ರಾಜನು ಬಹಳ ಸಂತೋಷಪಟ್ಟನು. ಆಚಾರ್ಯರ ಭವ್ಯವಾದ ಶರೀರ, ಅವರ ಗಂಭೀರ ನಡೆನುಡಿಗಳು ಮತ್ತು ಮೋಹಕ ವ್ಯಕ್ತಿತ್ವ ಅವನ ಮನಸ್ಸನ್ನು ಸೂರೆಗೊಂಡಿತು. ಅಲ್ಲಿಯೇ ನೆಲೆಸುವುದಿದ್ದರೆ, ಅರ್ಧ ರಾಜ್ಯವನ್ನೇ ಕೊಡುತ್ತೇನೆ ಎಂದು ಹೇಳಿದನು.

ಹಿಮಾಲಯಗಳಲ್ಲಿ ಸಂಚರಿಸುತ್ತಿದ್ದಾಗ, ಮಾರ್ಗಮಧ್ಯೆ ದಾಳಿ ಮಾಡಲು ಬಂದ ಒಂದು ಹುಲಿಯನ್ನು ಆಚಾರ್ಯರು ಅನಾಯಾಸವಾಗಿ ಎತ್ತಿಹಾಕಿದರು. ಬದರಿಕಾಶ್ರಮದಲ್ಲಿ ವ್ಯಾಸರು ಅವರಿಗೆ ಲಕ್ಷ್ಮೀಸಹಿತ ನಾರಾಯಣ ಸ್ವಾಮಿಯ ಎಂಟುವಿಗ್ರಹಗಳಿರುವ ಒಂದು ಕಲ್ಲನ್ನು ಕೊಟ್ಟರು. ಅದನ್ನು ವ್ಯಾಸಮುಷ್ಟಿ ಎನ್ನುತ್ತಾರೆ. ಈ ಬಾರಿ ವ್ಯಾಸರು ಆಚಾರ್ಯರಿಗೆ ತಾವು ರಚಿಸಿದ ಮಹಾಭಾರತದ ನಿಜವಾದ ಅರ್ಥವು ಹೊರಹೊಮ್ಮುವಂತೆ ಒಂದು ವಿಸ್ತಾರವಾದ ವ್ಯಾಖ್ಯಾನವನ್ನು ರಚಿಸಲು ಆದೇಶವಿತ್ತರು.

ಅನಂತರ ಆಚಾರ್ಯರು ಗಂಗಾನದಿಯ ಕಣಿವೆಯ ಜಾಗಕ್ಕೆ ಕೆಳಗಿಳಿದು ಬಂದರು. ಗಂಗಾತಟದಲ್ಲಿ ಒಂದು ಪವಾಡವನ್ನು ಮಾಡಿದರು. ಅವರು ತಮ್ಮ ಬಟ್ಟೆಯ ಅಂಚೂ ನೆನೆಯದಂತೆ, ಗಂಗೆಯನ್ನು ಬರಿಗಾಲಿನಲ್ಲಿ ದಾಟಿದರು. ರಾಜಧಾನಿಯಾದ ಹಸ್ತಿನಾಪುರಕ್ಕೆ ತೆರಳಿ, ಅಲ್ಲಿ ಚಾತುರ್ಮಾಸ್ಯ ವ್ರತವನ್ನು ಕೈಗೊಂಡರು. ಅದಕ್ಕಾಗಿ ಗಂಗೆಯಿಂದ ಅಲ್ಪದೂರದಲ್ಲಿಯೇ ನಿರ್ಜನ ಸ್ಥಾನವೊಂದನ್ನು ಆಯ್ಕೆಮಾಡಿಕೊಂಡರು. ಅಲ್ಲಿ ಚಾತುರ್ಮಾಸ್ಯ ವ್ರತಕ್ಕೆ ಕುಳಿತರು. ಆ ಸಮಯದಲ್ಲಿ ಗಂಗೆಯೇ ಒಬ್ಬ ಮಹಿಳೆಯ

ರೂಪದಲ್ಲಿ ಬಂದು ಆಚಾರ್ಯರನ್ನು ಆರಾಧಿಸಿಹೋದಳು. ಅನಂತರ ದಕ್ಷಿಣದಿಕ್ಕಿಗೆ ಅವರ ಪಯಣ ಸಾಗಿತು. ಒಮ್ಮೆ ಹದಿನೈದು ಜನ ಯುವಕ ಪೈಲ್ವಾನರು ಅವರ ಜೊತೆ ಕುಸ್ತಿಯಾಡಲು ಬಂದರು. ಆಚಾರ್ಯರು ಅವರೆಲ್ಲರೆನ್ನೂ ಒಮ್ಮೆಗೇ ಕೆಡವಿದರು. ಅವರ ಕೈಗಳು ಮತ್ತು ಬೆರಳುಗಳು ಒಂದು ಪರ್ವತದಷ್ಟು ಭಾರವಾಗಿರುವದನ್ನು ಭಾವಿಸಿದರು. ಹೀಗೆ ಆಚಾರ್ಯರು ತಾವು ಆಧ್ಯಾತ್ಮಿಕವಾಗಿ ಮತ್ತು ಬೌದ್ಧಿಕವಾಗಿ ಮಾತ್ರವಲ್ಲದೆ, ದೈಹಿಕವಾಗಿಯೂ ಶಕ್ತಿವಂತರು ಎಂಬುದನ್ನು ಪ್ರದರ್ಶಿಸಿದರು. ಕುರುಕ್ಷೇತ್ರದಲ್ಲಿ ತಾವು ಹಿಂದಿನ ಅವತಾರದಲ್ಲಿ ಭೀಮಸೇನನಾಗಿದ್ದಾಗ ಅಡಗಿಸಿ ಇಟ್ಟಿದ್ದ ಮಹಾನ್ ಗದೆಯ ಬಗ್ಗೆ ಹೇಳಿದರು. ಶಿಷ್ಯರೆಲ್ಲ ಉತ್ಸುಕರಾಗಿ ಅದನ್ನು ನೋಡಲು ಹಾತೊರೆದರು. ಆಗ ಆಚಾರ್ಯರು ಒಂದು ಸ್ಥಳವನ್ನು ತೋರಿಸಿ ಅದನ್ನು ಅಗೆಯುವಂತೆ ಹೇಳಿದರು. ಅಲ್ಲಿ ಬೃಹತ್ತಾದ ಆ ಗದೆ ಕಂಡುಬಂತು. ಇನ್ನೊಮ್ಮೆ ಇಷುಪಾತ ಎಂಬ ಪ್ರದೇಶದಲ್ಲಿ ಅವರು ಭಿಕ್ಷೆಗೆಂದು ನಿವೇದಿಸಿದ ಗೊನೆಗಟ್ಟಲೆ ಸಾವಿರ ದೊಡ್ಡ ದೊಡ್ಡ ಬಾಳೆಯ ಹಣ್ಣುಗಳನ್ನು ಸೇವಿಸಿದರು. ಹೀಗೆ ತಮ್ಮ ಇನ್ನೊಂದು ಅವತಾರವಾದ ಹನುಮಂತನ ಮಹಾನ್ ಶಕ್ತಿಯನ್ನು ಈ ಜನ್ಮದಲ್ಲಿಯೂ ತೋರಿಸಿದರು. ಗೋವೆಯಲ್ಲಿ ಅವರು ಮೂವತ್ತು ಸೇರು ಹಾಲಿನೊಡನೆ ನಾಲ್ಕು ಸಾವಿರ ದೊಡ್ಡ ದೊಡ್ಡ ಕಳಿತ ಬಾಳೆಯ ಹಣ್ಣುಗಳನ್ನು ತಿಂದುಬಿಟ್ಟರಂತೆ!

### ಉಡುಪಿಯ ವಾಸ್ತವ್ಯ ಮತ್ತು ಭಕ್ತರ ಜೊತೆ ಸತ್ಸಂಗ

ಉಡುಪಿಗೆ ತಿರುಗಿಬಂದ ಆಚಾರ್ಯರು ಇನ್ನಾವುದೇ ತೀರ್ಥಯಾತ್ರೆಯನ್ನು ಕೈಗೊಂಡಂತೆ ಕಾಣುವುದಿಲ್ಲ. ಅದಕ್ಕಾಗಿ ಅವರು ದೇಶದ ಇನ್ನಾವುದೇ ದೂರದ ಪ್ರದೇಶಕ್ಕೆ ಹೋಗಲಿಲ್ಲ. ಹಾಗಿದ್ದರೂ ಅವರು ಉಡುಪಿಯಲ್ಲಿಯೇ ಬಹಳ ಸಕ್ರಿಯ ಜೀವನವನ್ನು ನಡೆಸಿದರು. ಹಲವಾರು ಗ್ರಂಥಗಳನ್ನು ರಚಿಸಿದರು ಮತ್ತು ಹಲವಾರು ಪ್ರತಿವಾದಿಗಳನ್ನು ವ್ಯಾಖ್ಯಾನ ಚರ್ಚೆಯಲ್ಲಿ ಸೋಲಿಸಿದರು. '**ಮಧ್ವವಿಜಯ**'ದಲ್ಲಿ ಅಂಥ ಒಂದು ವಾದದ ಉಲ್ಲೇಖ ಇದೆ. ಪುಂಡರೀಕಪುರಿ ಎಂಬ ಅದ್ವೈತ ಪಂಡಿತ ಹಾಗೂ ಪದ್ಮತೀರ್ಥ ಎಂಬ ಅವನ ಸಹವರ್ತಿ ಆಚಾರ್ಯರೊಡನೆ ವಾದ ಮಾಡಿದರು. ವಾದ ಬಹಳ ಜೋರಾಗಿಯೇ ನಡೆಯಿತು. ವಾದದಲ್ಲಿ ಸೋತ ಇವರಿಬ್ಬರೂ ಇನ್ನು ಕೆಲವರ ಜೊತೆಗೆ ಸೇರಿ ಒಂದು ಕುತಂತ್ರವನ್ನು ರೂಪಿಸಿದರು. ಅದರ ಪ್ರಕಾರ ಆಚಾರ್ಯರ ಗ್ರಂಥಾಲಯದಲ್ಲಿ ಇದ್ದ ಅಮೂಲ್ಯ ಹಸ್ತಪ್ರತಿಗಳನ್ನು ಕದ್ದುಕೊಂಡು ಹೋದರು. ಇದರಿಂದ ದ್ವೈತವೇದಾಂತದ ಪ್ರಸಾರವನ್ನು ತಡೆಗಟ್ಟಬಹುದು ಎಂದು ಅವರು ಯೋಚಿಸಿದ್ದರು. ಆದರೆ ಆ ಹಸ್ತಪ್ರತಿಗಳನ್ನು ಕೆಲವೇ ಸಮಯದಲ್ಲಿ ಕುಂಬಮೇಡು ರಾಜ್ಯದ ಸೈನಿಕರು ತಮ್ಮ ವಶಕ್ಕೆ ಪಡೆದುಕೊಂಡರು. ಹಸ್ತಪ್ರತಿಗಳನ್ನು ಸ್ವೀಕರಿಸಲು ದಯಮಾಡುವಂತೆ ಅಲ್ಲಿನ ರಾಜ ಜಯಸಿಂಹನು ಆಚಾರ್ಯರನ್ನು ಆಹ್ವಾನಿಸಿದನು. ಅದರಂತೆ ತಮ್ಮ ಶಿಷ್ಯರೊಂದಿಗೆ ಆಚಾರ್ಯರು ಅವನ ಅರಮನೆಗೆ ಹೋಗಿ ಕಳೆದುಹೋಗಿದ್ದ ಹಸ್ತಪ್ರತಿಗಳನ್ನು ಮತ್ತೆ ಪಡೆದುಕೊಂಡರು. ಕಳ್ಳರಿಂದ ಅದನ್ನು ವಶಪಡಿಸಿಕೊಳ್ಳಲಾಗಿತ್ತು. ರಾಜನು ಅವರನ್ನು ಬಹಳ ವಿನಯದಿಂದ ಬರಮಾಡಿಕೊಂಡು ಗೌರವ ತೋರಿಸಿ, ಹಸ್ತಪ್ರತಿಗಳನ್ನು ತಾನೇ ಕೊಟ್ಟನು. ಆಚಾರ್ಯರು ತದನಂತರ ವಿಷ್ಣುಮಂಗಲ ದೇವಸ್ಥಾನಕ್ಕೆ ಭೇಟಿಕೊಟ್ಟರು. ಅಲ್ಲಿ ಅವರ ದರ್ಶನವನ್ನು ಪಡೆದುಕೊಳ್ಳಲು ಮತ್ತು ಗೌರವವನ್ನು ಸಲ್ಲಿಸಲು ಭಾರೀ ಸಂಖ್ಯೆಯಲ್ಲಿ ಜನರು ಸೇರಿದ್ದರು. ಆಚಾರ್ಯರು ಆ ಜನರಿಗೆ ಭಾಗವತಪುರಾಣವನ್ನು ಕುರಿತು, ಅದರಲ್ಲೂ ಶ್ರೀಕೃಷ್ಣಾವತಾರವನ್ನು ಕುರಿತು ಪ್ರವಚನಗಳನ್ನು ಮಾಡಿದರು.

ಕುಂಬನಾಡುವಿಗೆ ಆಚಾರ್ಯರು ನೀಡಿದ ಭೇಟಿ ಮಹತ್ವಪೂರ್ಣವಾದುದು. ಅಲ್ಲಿಯೇ ಅವರು ತಮ್ಮ ವಿದ್ವಾನ್ ಶಿಷ್ಯರಾದ ತ್ರಿವಿಕ್ರಮ ಪಂಡಿತರನ್ನು ಭೇಟಿಯಾದದ್ದು. ಪಂಡಿತರು ರಾಜ ಜಯಸಿಂಹನ ಆಸ್ಥಾನದ ಆಸ್ಥಾನ ಪಂಡಿತರು. ಸುಬ್ರಮಣ್ಯ ಪಂಡಿತರೆಂಬ ಮಹಾನುಭಾವರ ಸುಪುತ್ರರು. ಅಂದಿನ ಕಾಲದಲ್ಲಿ ಪ್ರಚಲಿತದಲ್ಲಿ ಇದ್ದ ಅದ್ವೈತವೇದಾಂತದಲ್ಲಿ ಅವರು ಪ್ರಸಿದ್ಧ ವಿದ್ವಾಂಸರಾಗಿದ್ದರು. ಅವರಿಗೆ ಮಧ್ವರ ಭಕ್ತಿತತ್ತ್ವದ ಬಗ್ಗೆಯೂ ಸಾಕಷ್ಟು ಪರಿಚಯವಿತ್ತು. ಆದರೆ ನಿರ್ಗುಣ ಬ್ರಹ್ಮ ಮತ್ತು ಜಗತ್ತಿನ ಮಿಥ್ಯೆಯ ವಿಷಯದಲ್ಲಿ ಮಾಯಾವಾದದ ನಿಲುವುಗಳಿಗೆ ಅವರು ಬದ್ಧರಾಗಿದ್ದರು. ಅವುಗಳಲ್ಲಿ ನಿಶ್ಚಯಬುದ್ಧಿ ಅವರಿಗೆ ಇತ್ತು. ಅವರು ವಿಷ್ಣುಮಂಗಲದ ದೇವಸ್ಥಾನದಲ್ಲಿ ನಡೆದ ಮಧ್ವಾಚಾರ್ಯರ ಪ್ರವಚನಗಳನ್ನು ಭಕ್ತಿಯಿಂದ ಶ್ರವಣ ಮಾಡಿದರು. ಆಚಾರ್ಯರು ಅಲ್ಲಿ ಕೆಲವು ದಿವಸಗಳ ಕಾಲ ವಾಸ್ತವ್ಯಹೂಡಿದ್ದರು. ಆ ದೇವಸ್ಥಾನದಿಂದ ಪಡಿಕೂಡಿಲ್ ಎಂಬ ಹಳ್ಳಿಯಲ್ಲಿರುವ ಇನ್ನೊಂದು ದೇವಸ್ಥಾನಕ್ಕೆ ನಿವಾಸ ಬದಲಿಸಿದರು. ಅಲ್ಲಿಯೂ ಆಸ್ತಿಕ ಮತ್ತು ನಾಸ್ತಿಕ ದರ್ಶನಗಳ ಬಗ್ಗೆ ಮನೋಹರ ವ್ಯಾಖ್ಯಾನವನ್ನು ನೀಡುತ್ತ ಅವೆಲ್ಲವನ್ನೂ ಖಂಡಿಸಿದರು. ಅಲ್ಲಿನ ಸಭಿಕರಲ್ಲಿ ತ್ರಿವಿಕ್ರಮ ಪಂಡಿತರೂ ಒಬ್ಬರಾಗಿದ್ದರು. ಅವರು ಆಚಾರ್ಯರ ಜೊತೆಗೆ ವಾದಕ್ಕೆ ಇಳಿದರು. ಇವರಿಬ್ಬರ ನಡುವಿನ ಸಂಭಾಷಣೆ ಹದಿನೈದು ದಿನಗಳ ಕಾಲ ನಡೆಯಿತು. ಕಡೆಯಲ್ಲಿ ತ್ರಿವಿಕ್ರಮ ಪಂಡಿತರು ಆಚಾರ್ಯರಿಗೆ ಸಾಷ್ಟಾಂಗ ಪ್ರಣಾಮ ಮಾಡಿ, ತಮ್ಮ ಸೋಲನ್ನೊಪ್ಪಿಕೊಂಡರು. ಮಾಯಾವಾದದ ಬಗ್ಗೆ ಮತ್ತು ನಿರ್ಗುಣ ಬ್ರಹ್ಮತತ್ತ್ವದ ಬಗ್ಗೆ ಅವರಿಗಿದ್ದ ಒಲುಮೆಯನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟರು. ಅನಂತರ ಆಚಾರ್ಯರು ವೇದಾಂತಸೂತ್ರಗಳ ಮೇಲೆ ತಮ್ಮ ವ್ಯಾಖ್ಯಾನವನ್ನು ಆರಂಭಿಸಿದರು. ಅದಕ್ಕೆ ಅವರು ಬದರಿಯಲ್ಲಿದ್ದಾಗ ಸಂಕ್ಷಿಪ್ತ ಭಾಷ್ಯವನ್ನು ಬರೆದಿದ್ದರು. ಅದಕ್ಕೆ ಸುದೀರ್ಘವಾದ ಮತ್ತು ವಿವರಣಾತ್ಮಕವಾದ ಟೀಕೆಯನ್ನು ಬರೆಯುವಂತೆ ತ್ರಿವಿಕ್ರಮ ಪಂಡಿತರನ್ನು ಆಚಾರ್ಯರು ಕೇಳಿಕೊಂಡರು.

*(ಮುಂದುವರಿಯುವುದು)*



# ಚೋಖಾಮೇಳ

**ಕಥೆ : ಕೆ ಅಳಗರಾಜ** **ಚಿತ್ರ: ಗೋವಿ**

1 ಚೋಖಾಮೇಳನು ಕೆಳಜಾತಿಯಲ್ಲಿ ಹುಟ್ಟಿದ ಸಂತ. ಪಂಡರಾಪುರದ ವಿಠಲನನ್ನು ಕುರಿತು ಹಾಡುತ್ತಾ ಅವನು ಭಾವೋನ್ಮತ್ತನಾಗುತ್ತಿದ್ದನು.




2 ಆ ಪ್ರದೇಶದ ಜನರು ನಿಧಾನವಾಗಿ ಚೋಖಾಮೇಳನ ಹಿತನುಡಿಗಳನ್ನು ಕೇಳಲಾರಂಭಿಸಿದರು. ಕಾಲ ಕಳೆದಂತೆ, ಅವರು ಭಜನೆ ಹಾಡುತ್ತ ಸಂತೋಷಪಡಲಾರಂಭಿಸಿದರು. ಆದರೆ ಅಲ್ಲಿನ ಅರ್ಚಕರು ಚೋಖಾಮೇಳನನ್ನು ದೇವಾಲಯ ಪ್ರವೇಶಿಸದಂತೆ ತಡೆದರು.




ಆ ಬಳಿಕ ಚೋಖಾಮೇಳನಿಗೆ ದೇವಾಲಯದ ಒಳಗೆ ಹೋಗಲಾಗಲಿಲ್ಲ. ಹೃದಯವೇ ಭಗವಂತನು ನೆಲೆಸಿರುವ ಸ್ಥಳ ಎಂದು ಅವನಿಗೆ ಮನವರಿಕೆ ಯಾಯಿತು. ಅವನು ಮನೆಯಲ್ಲಿದ್ದುಕೊಂಡೇ ದೇವರನ್ನು ಪೂಜಿಸತೊಡಗಿದ.

3 ಒಂದಿ ದಿನ ಚೋಖಾಮೇಳನು ಪಾಂಡುರಂಗನ ಭಜನೆ ಮಾಡುತ್ತ ನಿದ್ದೆ ಹೋಗಿದ್ದ. ಮಧ್ಯರಾತ್ರಿ ಹೊತ್ತು ಭಗವಾನ್ ಪಾಂಡುರಂಗನು ಅವನ ಮುಂದೆ ಕಾಣಿಸಿಕೊಂಡ.




4


5 ಚೋಖಾಮೇಳನು ಭಾವೋನ್ಮತ್ತನಾಗಿ ಸಮಾಧಿ ಸ್ಥಿತಿಗೆ ಹೋದ. ಆಗ ದೇವಾಲಯದ ಬಾಗಿಲುಗಳು ತಾವಾಗಿಯೇ ತೆರೆದುಕೊಂಡವು. ತಾವಾಗಿಯೇ ದೀಪಗಳು ಬೆಳಗಿದವು, ಗಂಟೆಗಳು ಮೊಳಗಿದವು. ಪಂಡರೀನಾಥನು ತನ್ನ ದಿವ್ಯಮೂರ್ತಿಯನ್ನು ತೋರಿ ಅವನ ಮುಂದೆ ಪ್ರತ್ಯಕ್ಷನಾದನು. ಚೋಖಾಮೇಳ ಮೈಮರೆತ; ದೇವರ ಮುಂದೆ ನಮಸ್ಕರಿಸಿ, ನೆಲದಲ್ಲಿ ಹೊರಳಾಡುತ್ತ ಒಂದೇ ಸಮನೆ ಅಳಲಾರಂಭಿಸಿದ.



6 ಮಧ್ಯರಾತ್ರಿಯಲ್ಲಿ ದೇವಾಲಯದ ಗಂಟೆಯ ಸದ್ದನ್ನು ಕೇಳಿದ ಅರ್ಚಕರು ಅಲ್ಲಿಗೆ ಓಡೋಡಿ ಬಂದರು. ದೇಗುಲದ ಒಳಗೆ ಚೋಖಾಮೇಳನು ಧ್ಯಾನ ಮಾಡುತ್ತಿದ್ದುದನ್ನು ಕಂಡು ಅವರಿಗೆ ಆಘಾತವಾಯಿತು. ಚೋಖಾಮೇಳನು ಅಲ್ಲಿಗೆ ಕದಿಯಲು ಬಂದಿದ್ದಾನೆಂದು ಕೆಲವರು ಕೂಗಾಡಿದರು. ಉಳಿದ ಮಂದಿ ಕೂಡ ಅವನನ್ನು ಕ್ರೂರವಾಗಿ ನಡೆಸಿಕೊಂಡರು.




7 ಈ ಘಟನೆಯ ನಂತರ ಚೋಖಾಮೇಳನು ಚಂದ್ರಭಾಗಾ ನದಿಯ ಇನ್ನೊಂದು ದಡದಲ್ಲಿ ಜೀವಿಸತೊಡಗಿದ. ಅವನು ಏಕಾದಶಿಯಂದು ರಾತ್ರಿ ಭಜನೆ ಹಾಡುತ್ತಿದ್ದ. ಮರುದಿನ ಬೆಳಿಗ್ಗೆ ಸ್ನಾನ ಮಾಡಿ, ತುಳಸಿಯ ನೀರನ್ನು ಕುಡಿಯುತ್ತಿದ್ದ. ಹೀಗಿರುವಾಗ ಒಂದು ದಿನ ಊರ್ಧ್ವಪುಂಡ್ರ ನಾಮವನ್ನು ಹಣೆಯಲ್ಲಿ ಧರಿಸಿದ ವೃದ್ಧನೊಬ್ಬ ಅಲ್ಲಿಗೆ ಬಂದ.



8



9 ಆ ವೃದ್ಧನು ಪ್ರತಿ ದ್ವಾದಶಿಯಂದು ಅಲ್ಲಿಗೆ ಬರತೊಡಗಿದ. ಅವನು ಬೇರಾರೂ ಅಲ್ಲ , ಸರಳರೂ ಸಾಮಾನ್ಯರೂ ಆದ ಜನರ ಹೃದಯದಲ್ಲಿ ವಾಸಮಾಡುವ ಭಗವಾನ್ ವಿಠಲನೇ ಎಂದು ಚೋಖಾಮೇಳ ದಂಪತಿಗಳಿಗೆ ಅರಿವಾಯಿತು. ಒಂದು ದ್ವಾದಶಿಯ ದಿನ ಚೋಖಾಮೇಳನು ಗಾಢನಿದ್ರೆಯಲ್ಲಿದ್ದ. ಸ್ವಲ್ಪ ಹೊತ್ತಿನ ನಂತರ ಇದ್ದಕ್ಕಿದ್ದಂತೆ ಎಚ್ಚರಗೊಂಡ.




10 ಚೋಖಾಮೇಳನು ಭಕ್ತಿಯಿಂದ ಚಂದ್ರಭಾಗಾ ನದಿಯಲ್ಲಿ ಸ್ನಾನ ಮಾಡಲು ಹೋದಾಗ ಜನರು ಅವನನ್ನು ತಡೆದರು.




ಚೋಖಾಮೇಳನು ದೇವರಿಗೆ ಅಗೌರವ ತೋರಿಸಿದ್ದಾನೆ ಎಂದು ರಾಜನವರೆಗೂ ದೂರು ಹೋಯಿತು.

11 ರಾಜನ ಬಳಿಗೆ ಚೋಖಾಮೇಳನನ್ನು ಕರೆತಂದರು.




ರಾಜಾಜ್ಞೆಯಂತೆ ಚೋಖಾಮೇಳನನ್ನು ಕಾಡಿನ ಮಧ್ಯೆ ಬಿಟ್ಟುಬಿಟ್ಟರು. ಒಬ್ಬ ರಾಜಭಟನು ದೂರದಲ್ಲಿ ಅಡಗಿ ನಿಂತು ಅವನನ್ನು ಗಮನಿಸುತ್ತಿದ್ದ. ಚೋಖಾಮೇಳನಂತಹ ನಿಜವಾದ ಭಕ್ತರಿಗೆ ಏನಾಗುವುದೋ ಎಂದು ಅವನಿಗೆ ಚಿಂತೆಯಾಯಿತು. ಆದರೆ ಚೋಖಾಮೇಳನು ಮೈಮರೆತು ವಿಠಲನ ಕೀರ್ತನೆ ಹಾಡುತ್ತಲೇ ಇದ್ದ. ಅಷ್ಟರಲ್ಲಿ ...

12



**13** ಆ ರಾಜಭಟನು ಕೂಡಲೇ ರಾಜನ ಬಳಿಗೆ ಓಡಿಹೋಗಿ, ತಾನು ಕಂಡದ್ದನ್ನೆಲ್ಲ ವಿವರಿಸಿದ. ಚೋಖಾಮೇಳನ ಹಿರಿಮೆ ರಾಜನಿಗೂ ಅರ್ಥವಾಯಿತು; ಅವನನ್ನು ನೋಡಲು ಅವನಿದ್ದಲ್ಲಿಗೆ ಓಡಿದ. ಅವನನ್ನು ಕೂಡಲೇ ಬಿಡಿಸಿ ತರಲು ಆಜ್ಞಾಪಿಸಿದ. ಆನಂದದಿಂದ ಚೋಖಾಮೇಳ ಮನೆಗೆ ಮರಳಿದ.

ಎಂದಿನಂತೆ ದ್ವಾದಶಿಯ ದಿನ ಅದೇ ವೃದ್ಧನು ಆಹಾರಕ್ಕಾಗಿ ಅವರ ಮನೆಗೆ ಬಂದ. ಆಗ ...




ಆ ದಾರಿಯಲ್ಲೇ ಹೋಗುತ್ತಿದ್ದ ಕೆಲವರು ಈ ಮಾತುಕತೆಗಳನ್ನು ಕೇಳಿಸಿಕೊಂಡರು. ಕೆಳಜಾತಿಯವನಾದ ಚೋಖಾಮೇಳನ ಮನೆಯಲ್ಲಿ ದೇವರು ಊಟ ಮಾಡಿದನೆಂಬುದನ್ನು ಅವನಿಗೆ ಸಹಿಸಲಾಗಲಿಲ್ಲ. ಅವನು ಚೋಖಾಮೇಳನಿಗೆ ಕೋಪದಿಂದ ಚೆನ್ನಾಗಿ ಬಾರಿಸಿಬಿಟ್ಟ. ಅನಂತರ ಅವನು ದೇವಾಲಯಕ್ಕೆ ಹೋದ.

**14** ಅದೇನು ಆಶ್ಚರ್ಯ! ಆ ಬ್ರಾಹ್ಮಣನು ದೇವಾಲಯಕ್ಕೆ ಹೋಗಿ ನೋಡಿದಾಗ, ದೇವರ ಕೆನ್ನೆ ಊದಿಕೊಂಡು, ಕೆಂಪು ಬಣ್ಣಕ್ಕೆ ತಿರುಗಿತ್ತು. ದೇವರ ಪೀತಾಂಬರದಲ್ಲಿ ಮೊಸರು ಚೆಲ್ಲಿದ ಗುರುತುಗಳಿದ್ದವು. ಅದನ್ನು ನೋಡಿದ ಅರ್ಚಕರೂ ಭಕ್ತರೂ ಸ್ತಂಭೀಭೂತರಾದರು. ಸಾಕಷ್ಟು ವಿಚಾರಿಸಿದ ಮೇಲೆ ತಿಳಿದು ಬಂತು, ಆ ಬ್ರಾಹ್ಮಣ ಚೋಖಾಮೇಳನ ಕೆನ್ನೆಗೆ ಬಾರಿಸಿದ್ದರಿಂದಲೇ ದೇವರ ಕೆನ್ನೆ ಊದಿಕೊಂಡಿತ್ತು ಎಂಬುದಾಗಿ.

**15** ಚೋಖಾಮೇಳನನ್ನು ಪೂರ್ಣಕುಂಭದೊಂದಿಗೆ ಸ್ವಾಗತಿಸಬೇಕೆಂದು ಪಂಡರೀನಾಥನು ಅರ್ಚಕನನ್ನು ಕಳುಹಿಸಿದ.




''ದೇವರು ದಿವ್ಯವಾದ ಕಣ್ಣುಗಳನ್ನು ನೀಡುತ್ತಾನೆ. ಆಗ ಮಾತ್ರ ಅವನನ್ನು ನಾವು ನೋಡಬಹುದು. ಅರ್ಜುನನಿಗೆ ಅವನು ದಿವ್ಯ ಚಕ್ಷುಗಳನ್ನು ನೀಡಿದ; ಆಗ ಮಾತ್ರವೇ ಅವನು ದೇವರ ವಿಶ್ವರೂಪವನ್ನು ನೋಡಲು ಸಾಧ್ಯವಾಯಿತು.

''ಭಗವಂತನನ್ನು ನೋಡಲು ನಮಗೆ ಎಂತಹ ಪ್ರೀತಿ ಇರಬೇಕು ಗೊತ್ತೆ? ಪತಿಯ ಮೇಲೆ ನಿಷ್ಠಾವಂತ



ಪತ್ನಿಗಿರುವ ಪ್ರೀತಿ, ಜಿಪುಣನಿಗೆ ತನ್ನ ಸಂಪತ್ತಿನ ಮೇಲಿರುವ ಪ್ರೀತಿ, ಪ್ರಾಪಂಚಿಕರಿಗೆ ತಮ್ಮ ಪ್ರಾಪಂಚಿಕ ವಸ್ತುಗಳ ಮೇಲಿರುವ ಪ್ರೀತಿ — ಇವು ಮೂರನ್ನೂ ಒಂದುಗೂಡಿಸಿದಾಗ ಎಂತಹ ಪ್ರೀತಿ ಉಂಟಾಗುವುದೋ, ಅಂತಹ ಪ್ರೀತಿ ಭಗವಂತನ ಮೇಲೆ ಉಂಟಾದಾಗ ನಿನಗೆ ಅವನ ದರ್ಶನ ದೊರಕುವುದು.''

–ಶ್ರೀರಾಮಕೃಷ್ಣರು








# ‘ಸ್ವಚ್ಛ ಮೈಸೂರು ಸ್ವಸ್ಥ ಜೀವನ’: ಸಮಾರೋಪ

ಮೈಸೂರು ಶ್ರೀರಾಮಕೃಷ್ಣ ಆಶ್ರಮವು ಹಮ್ಮಿಕೊಂಡಿದ್ದ ೪೦ ವಾರಗಳ **‘ಸ್ವಚ್ಛ ಮೈಸೂರು ಸ್ವಸ್ಥ ಜೀವನ’** ಎಂಬ ಸ್ವಚ್ಛತಾ ಅಭಿಯಾನ ಮತ್ತು ಜನಜಾಗೃತಿ ಕಾರ್ಯಕ್ರಮದ ೪೦ನೇ ವಾರದ ಅಭಿಯಾನವು ೨೦೧೭ರ ಡಿಸೆಂಬರ್ ೩೧ ರಂದು ನಗರದ ರಾಮಕೃಷ್ಣನಗರದ ‘ಐ’ ಬ್ಲಾಕ್, ವಾಸು ಲೇಔಟ್, ಇ ಮತ್ತು ಎಫ್ ಬ್ಲಾಕ್, ಮಾಧವ ಪಾರ್ಕ್, ಡಿ.ವಿ.ಸಿ. ಲೇಔಟ್ ಸೇರಿದಂತೆ ವಿವಿಧ ಭಾಗಗಳಲ್ಲಿ ಯಶಸ್ವಿಯಾಗಿ ನಡೆಯಿತು.

೪೦ನೇ ವಾರದ **‘ಧನ್ಯತಾ ಸಮಾರಂಭ’**ದಲ್ಲಿ ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರಾದ ಸ್ವಾಮಿ ಆತ್ಮಜ್ಞಾನಂದಜಿ ಮಹಾರಾಜ್, ಮುಖ್ಯ ಅತಿಥಿಗಳಾಗಿ ಮೈಸೂರು ಜಿಲ್ಲಾಧಿಕಾರಿಗಳಾದ ಶ್ರೀ ಡಿ. ರಂದೀಪ್, ಮೈಸೂರು ಮಹಾನಗರಪಾಲಿಕೆಯ ಆಯುಕ್ತರಾದ ಶ್ರೀ ಜಿ. ಜಗದೀಶ್, ವಿಶೇಷ ಆಹ್ವಾನಿತರಾಗಿ ಮೈಸೂರು ಮಹಾನಗರಪಾಲಿಕೆಯ ಮಹಾಪೌರರಾದ ಶ್ರೀ ಎಂ. ಜೆ. ರವಿಕುಮಾರ್, ಮಾಜಿ ವಿಧಾನಪರಿಷತ್ ಸದಸ್ಯರಾದ ಶ್ರೀ ಡಿ. ಮಾದೇಗೌಡ, ಅಂತರಾಷ್ಟ್ರೀಯ ಯೋಗಪಟು ಕು. ಖುಷಿ, ಎಂ. ಸಿ. ಸಿ. ಫೆಡರೇಷನ್ ಆಫ್ ವಾರ್ಡ್ ಪಾರ್ಲಿಮೆಂಟಿನ ಉಪಾಧ್ಯಕ್ಷರಾದ ಪ್ರೊ. ಕೆ. ಎಸ್. ನಾಗಪತಿ ಮೊದಲಾದವರು ಪಾಲ್ಗೊಂಡಿದ್ದರು. ರಾಮಕೃಷ್ಣನಗರದ ನಗರಪಾಲಿಕೆ ಸದಸ್ಯರಾದ ಶ್ರೀ ಎಂ. ಕೆ. ಶಂಕರ್ ಅವರು ಈ ಕಾರ್ಯಕ್ರಮವನ್ನು ಆಯೋಜಿಸಿದ್ದರು.

ಸ್ವಾಮೀಜಿಯವರು, ಮುಖ್ಯ ಅತಿಥಿಗಳು ಮತ್ತು ವಿಶೇಷ ಆಹ್ವಾನಿತರು ಧನ್ಯತಾ ಸಮಾರಂಭದಲ್ಲಿ ಸೇರಿದ ಪ್ರತಿಯೊಬ್ಬರಲ್ಲೂ ಸ್ವಚ್ಛತೆ ಕಾಪಾಡುವ ಸಂಕಲ್ಪ ಮಾಡಿ, ಸ್ವಚ್ಛತಾ ಅಭಿಯಾನದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕೆಂದು ವಿನಂತಿಸಿಕೊಂಡರು.

ಪ್ರತಿಯೊಬ್ಬರೂ ಸ್ವಚ್ಛತಾ ಆ್ಯಪ್‌ನ್ನು ಡೌನ್‌ಲೋಡ್ ಮಾಡಿ ಸಾರ್ವಜನಿಕ ಸ್ಥಳಗಳಲ್ಲಿ ಸಂಗ್ರಹವಾಗಿರುವ ಕಸದ ಬಗ್ಗೆ ದೂರನ್ನು ಕಳುಹಿಸುವ ಮೂಲಕ, ಸ್ವಚ್ಛ ಮೈಸೂರು ನಿರ್ಮಾಣ ಮಾಡಲು ಸಹಕರಿಸಬೇಕೆಂದು ಸಮಾರಂಭದಲ್ಲಿ ಸೇರಿದ ಎಲ್ಲರಲ್ಲಿ ವಿಶೇಷವಾಗಿ ವಿನಂತಿಸಿಕೊಳ್ಳಲಾಯಿತು.

ರಾಮಕೃಷ್ಣನಗರದ ಮುಖ್ಯ ರಸ್ತೆಗಳಲ್ಲಿ ಶಾಲೆ, ಕಾಲೇಜು ವಿದ್ಯಾರ್ಥಿಗಳ ಮೆರವಣಿಗೆಯ ಮೂಲಕ ಜನರಲ್ಲಿ ಸ್ವಚ್ಛತೆಯ ಬಗ್ಗೆ ಜಾಗೃತಿ ಮೂಡಿಸಿದ್ದು ಈ ಸಮಾರೋಪ ಕಾರ್ಯಕ್ರಮಕ್ಕೆ ವಿಶೇಷ ಮೆರುಗನ್ನು ನೀಡಿತು.

ಸ್ವಯಂಸೇವಕರು ಮತ್ತು ವಿದ್ಯಾರ್ಥಿಗಳು ಮನೆಮನೆಗಳಿಗೆ ಭೇಟಿ ನೀಡಿ ನಿವಾಸಿಗಳು ಕಸವನ್ನು ಹೊರಗಡೆ ಎಸೆಯಬಾರದು, ಪ್ಲಾಸ್ಟಿಕ್ ಚೀಲಗಳನ್ನು ಉಪಯೋಗಿಸಬಾರದು ಮತ್ತು ತಮ್ಮ ಸುತ್ತಮುತ್ತಲಿನ ಪ್ರದೇಶವನ್ನು ಸ್ವಚ್ಛವಾಗಿ ಕಾಪಾಡಿಕೊಳ್ಳಬೇಕು ಎಂದು ಈ ಅಭಿಯಾನದ ಮೂಲಕ ಸಾರ್ವಜನಿಕರಲ್ಲಿ ವಿನಂತಿಸಿಕೊಂಡರು.

ಆಶ್ರಮದ ಸ್ವಯಂಸೇವಕರು, ಕುವೆಂಪುನಗರದ ಪ್ರಥಮ ದರ್ಜೆ ಕಾಲೇಜು, ಟಿ.ಟಿ.ಎಲ್ ಕಾಲೇಜು, ವಿಶ್ವಪ್ರಜ್ಞ ಕಾಲೇಜು, ವಿಶ್ವಮಾನವ ಪ್ರೌಢಶಾಲೆ, ಕೌಟಿಲ್ಯ ವಿದ್ಯಾಲಯ, ಸುಪ್ರೀಂ ಪಬ್ಲಿಕ್ ಶಾಲೆ, ರಾಮಕೃಷ್ಣ ವಿದ್ಯಾಕೇಂದ್ರ, ಸುಕೃತ ಪದವಿಪೂರ್ವ ಕಾಲೇಜು ಮತ್ತು ರಾಮಯ್ಯ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳು ಮತ್ತು ಸ್ಥಳೀಯ ನಾಗರಿಕರನ್ನು ಒಳಗೊಂಡಂತೆ ಒಟ್ಟು ೮೦೦ ಜನ ಅಭಿಯಾನದಲ್ಲಿ ಪಾಲ್ಗೊಂಡು ಸಾರ್ವಜನಿಕರಲ್ಲಿ ಸ್ವಚ್ಛತೆಯ ಬಗ್ಗೆ ಅರಿವು ಮೂಡಿಸಿದರು. ಸ್ವಚ್ಛತೆಯನ್ನು ಕಾಪಾಡಲು ಬೇಕಾದ ಅಂಶಗಳನ್ನೊಳಗೊಂಡ ಕರಪತ್ರಗಳನ್ನು ಮನೆಮನೆಗಳಿಗೆ ವಿತರಿಸಲಾಯಿತು.









# ಮಂಗಳೂರು ರಾಮಕೃಷ್ಣ ಮಠದಲ್ಲಿ ‘ಭಾವಸಂಗಮ ೧೮: ಭಕ್ತ ಸಮಾಗಮ’

**ಮಂ**ಗಳೂರು ರಾಮಕೃಷ್ಣ ಮಠವು ಜನವರಿ ೨೬ ರಿಂದ ೨೮ರ ವರೆಗೆ ಮೂರು ದಿನಗಳ ‘ಸಮಸ್ತ ಕರ್ನಾಟಕದ ಸದ್ಭಕ್ತರಿಗಾಗಿ ಮೂರು ದಿನಗಳ ಕಾಲ ಚಿಂತನ-ಮಂಥನ’ ಕಾರ್ಯಕ್ರಮವಾದ **ಭಾವಸಂಗಮ-೧೮** ಅನ್ನು ನೆರವೇರಿಸಿತು. ಈ ಕಾರ್ಯಕ್ರಮದಲ್ಲಿ ಸುಮಾರು ೭೫೦ ಮಂದಿ ಭಕ್ತರು ಭಾಗವಹಿಸಿದ್ದರು. ದೂರದ ಊರುಗಳಿಂದ ಬಂದ ಸುಮಾರು ೩೦೦ ಮಂದಿ ಭಕ್ತರಿಗೆ ವಸತಿ ವ್ಯವಸ್ಥೆ ಮಾಡಲಾಗಿತ್ತು. ೧೮೯೩ರಲ್ಲಿ ಚಿಕಾಗೋದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಮಾಡಿದ ಐತಿಹಾಸಿಕ ಭಾಷಣದ ೧೨೫ನೇ ಶತಮಾನೋತ್ಸವವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ, **‘ಸಮನ್ವಯ ಮತ್ತು ಸ್ವೀಕಾರ’** ಎಂಬ ಪರಿಕಲ್ಪನೆಯೊಂದಿಗೆ ವಿವಿಧ ಗೋಷ್ಠಿಗಳನ್ನು ನಡೆಸಲಾಯಿತು. ಸುಮಾರು ಎಂಟು ಗೋಷ್ಠಿಗಳಲ್ಲಿ ಸಂನ್ಯಾಸಿಗಳು ಹಾಗೂ ವಿದ್ವಜ್ಜನರ ೨೫ ಭಾಷಣಗಳಿದ್ದವು. ದಿವ್ಯತ್ರಯರ ಜೀವನ ಸಂದೇಶ ಹಾಗೂ ಶಾಸ್ತ್ರಗಳ ಹಿನ್ನೆಲೆಯಲ್ಲಿ ‘ಸಮನ್ವಯ - ಸ್ವೀಕಾರ’ ವಿಷಯವನ್ನು ಕುರಿತಂತೆ ಈ ಭಾಷಣಗಳು ನಡೆದವು. ವಿವಿಧ ಪ್ರವಚನಕಾರರ ಚಿಂತನ-ಮಂಥನಗಳಿಂದ, ವೈವಿಧ್ಯಮಯ ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ಕಾರ್ಯಕ್ರಮವು ಅತ್ಯಂತ ಸ್ಫೂರ್ತಿದಾಯಕವೂ ಚೇತೋಹಾರಿಯೂ ಆಗಿತ್ತು .

**ಉದ್ಘಾಟನೆ:** ಜನವರಿ ೨೬ ರಂದು ಅಮೆರಿಕದ ಬಾಸ್ಟನ್‌ನಲ್ಲಿರುವ ವೇದಾಂತ ಸೊಸೈಟಿಯ ಮುಖ್ಯಸ್ಥರಾದ ಸ್ವಾಮಿ ತ್ಯಾಗಾನಂದಜಿಯವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಜನವರಿ ೨೮ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಉಡುಪಿ ಪೇಜಾವರ ಮಠದ ಶ್ರೀ ಶ್ರೀ ವಿಶ್ವಪ್ರಸನ್ನತೀರ್ಥ ಸ್ವಾಮೀಜಿಯವರು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು.

**ಚಿಂತನ-ಮಂಥನ ಗೋಷ್ಠಿಗಳು:** ದಿವ್ಯತ್ರಯರ ಸಮನ್ವಯ ಸಂದೇಶಗಳನ್ನು ಕುರಿತು ನಡೆದ ಈ ಗೋಷ್ಠಿಗಳಲ್ಲಿ ಸ್ವಾಮಿ ನಿತ್ಯಸ್ಥಾನಂದಜಿ, ಸ್ವಾಮಿ ಆತ್ಮಜ್ಞಾನಂದಜಿ, ಸ್ವಾಮಿ ತ್ಯಾಗೀಶ್ವರಾನಂದಜಿ, ಸ್ವಾಮಿ ಶಾಂತಿವ್ರತಾನಂದಜಿ, ಸ್ವಾಮಿ ಧರ್ಮವ್ರತಾನಂದಜಿ, ಸ್ವಾಮಿ ನಿರ್ಭಯಾನಂದ ಸರಸ್ವತಿ, ಸ್ವಾಮಿ ವೀರೇಶಾನಂದ ಸರಸ್ವತಿ, ಸ್ವಾಮಿ ಪ್ರಕಾಶಾನಂದಜಿ, ಮಾತಾ ವಿವೇಕಮಯಿ, ಮಾತಾ ಯೋಗಾನಂದಮಯಿ, ಮಾತಾ ತ್ಯಾಗಮಯಿ, ಡಾ. ಕೆ. ಅನಂತರಾಮು, ಡಾ. ಜಿ.ಎಸ್. ಜಯದೇವ, ಡಾ. ಕೆ. ಎಲ್. ಪ್ರಸನ್ನಾಕ್ಷೀ, ಲಕ್ಷ್ಮೀಶ ತೋಳ್ಪಾಡಿ, ಡಾ. ಶ್ರೀರಾಮ ಭಟ್ಟ, ಶ್ರೀಕೃಷ್ಣ ಉಪಾಧ್ಯಾಯ, ಡಾ. ತೇಜಸ್ವಿನಿ ಬಿ. ವೈ. ಭಾಗವಹಿಸಿದರು.

**ಸಾಂಸ್ಕೃತಿಕ ಕಾರ್ಯಕ್ರಮಗಳು:** ದತ್ತಾತ್ರೇಯ ವೇಲಂಕರ್ ಅವರಿಂದ **ಭಗವನ್ನಾಮ ಸಂಕೀರ್ತನ**, ಡಾ. ಎಂ. ಪ್ರಭಾಕರ ಜೋಷಿ, ಸರ್ಪಂಗಳ ಈಶ್ವರ ಭಟ್ ಹಾಗೂ ದೇರಾಜೆ ಸೀತಾರಾಮ ಭಟ್ ಹಾಗೂ ಇತರರಿಂದ **ತಾಳಮದ್ದಳೆ**, ಶ್ರೀ ವಿದ್ಯಾಭೂಷಣ ಅವರಿಂದ **ಭಕ್ತಿಗಾನಾಮೃತ**, ಡಾ. ಕಬ್ಬಿನಾಲೆ ಬಾಲಕೃಷ್ಣ ಭಾರದ್ವಾಜ್ ಅವರಿಂದ **ಕನ್ನಡ ಅಷ್ಟಾವಧಾನ**, ಕುದ್ರೋಳಿ ಗಣೇಶ್ ಅವರಿಂದ **‘ವಿಸ್ಮಯ ಜಾದೂ’** ಮ್ಯಾಜಿಕ್ ಶೋ ನಡೆದವು. ೨೮ರಂದು ಭಾನುವಾರ ಹಲವು ಮಂದಿ ಭಕ್ತರು ‘ಸ್ವಚ್ಛ ಮಂಗಳೂರು’ ಅಭಿಯಾನದಲ್ಲಿ ಪಾಲ್ಗೊಂಡರು.





Managing Editor : Swami Atmajnananda Editor : Swami Jnanayogananda
Printed and Published by Swami Atmajnananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಶಿವರಾತ್ರಿಹಬ್ಬದ ಶುಭಾಶಯಗಳು

# ಆರ್ಕಿಡ್ ಟ್ರಾವೆಲ್ & ಟೂರ್ಸ್






## ಹಿರಿಯರಿಗೆ ವಿಶೇಷ ರಿಯಾಯಿತಿ ದರದಲ್ಲಿ ಅಮೆರಿಕಾ ಪ್ರವಾಸ-2018

### 13 ದಿನಗಳ ಅಮೇರಿಕಾ ಪ್ರವಾಸ

**ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್, ಲಾಸ್ ಏಂಜಲೀಸ್, ಸ್ಯಾನ್‌ಫ್ರಾನ್ಸಿಸ್‌ಕೋ**

### 10 ದಿನಗಳ ಸಿಂಗಾಪುರ-ಮಲೇಶಿಯ-ಥೈಲ್ಯಾಂಡ್ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ, ವಿಂಗ್ಸ್ ಆಫ್ ಟೈಮ್,
ಜುರೋಂಗ್ ಬರ್ಡ್‌ಪಾರ್ಕ್, ಯುನಿವರ್ಸಲ್ ಸ್ಟುಡಿಯೋ,
ಮಲೇಶಿಯ : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್
ಥೈಲ್ಯಾಂಡ್ - ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್

### 6 ದಿನಗಳ ಶ್ರೀಲಂಕಾ ಪ್ರವಾಸ

**ರಾಮಾಯಣ ಕಾಲದ ಸ್ಥಳ ವೀಕ್ಷಣೆ**

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ, ಹನುಮಾನ್ ದೇವಸ್ಥಾನ ಹಾಗೂ
ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು

### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.-ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್

### 8 ದಿನಗಳ ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ) ಬೆಂಗಳೂರಿನಿಂದ ವಿಮಾನದಲ್ಲಿ

ಪ್ರವಾಸ ಸ್ಥಳಗಳು : ಶ್ರೀ ಮುಕ್ತಿನಾಥ ದೇವಸ್ಥಾನ, ಪಶುಪತಿನಾಥ ದೇವಸ್ಥಾನ, ಜಲನಾರಾಯಣ ದೇವಸ್ಥಾನ, ಶ್ರೀ ಕೃಷ್ಣ ದೇವಸ್ಥಾನ, ಕಠ್ಮಂಡು ಸಿಟಿ ಟೂರ್,
ಪೋಕ್ರಾ-ಬಿಂದಾಬಾಸಿನಿ ದೇವಸ್ಥಾನ, ತಾಲಭೈರವಿ ದೇವಸ್ಥಾನ, ದೋಣಿಯಲ್ಲಿ ಪೋಕ್ರಾ ಲೇಕ್ ಒಂದು ವಿಹಾರ, ಮನೋಕಾಮನ ದೇವಸ್ಥಾನ (ಕೇಬಲ್ ಕಾರ್‌ನಲ್ಲಿ)

### 3 ದಿನಗಳ ಅಹೋಬಿಲಂ ನವನಾರಸಿಂಹ ಪ್ರವಾಸ

ಪ್ರವಾಸ ಸ್ಥಳಗಳು: ಜ್ವಾಲಾನರಸಿಂಹ, ಪಾವನನರಸಿಂಹ, ವರಹಾನರಸಿಂಹ, ಕಾರಂಜಿನರಸಿಂಹ, ಮಾಲೋಲನರಸಿಂಹ, ಯೋಗನರಸಿಂಹ,
ಭಾರ್ಗವನರಸಿಂಹ, ಉಗ್ರನರಸಿಂಹ, ಛತ್ರವಟನರಸಿಂಹ ಹಾಗೂ ಲಕ್ಷ್ಮೀನರಸಿಂಹ

**ಕೈಲಾಸ ಮಾನಸ ಸರೋವರ ಯಾತ್ರೆ - ವಿವರಗಳಿಗೆ ಸಂಪರ್ಕಿಸಿ - 9900080793**

ಪ್ರಧಾನ ಕಛೇರಿ : ಬಸವನಗುಡಿ
ಫೋನ್: 080-26670646, 26621983
ಮೊಬೈಲ್ : 9900080794, 9900080796

ಶಾಖಾ ಕಛೇರಿ : ಮಲ್ಲೇಶ್ವರಂ
ಫೋನ್: 080-23445559
ಮೊಬೈಲ್ : 9900080793, 9900080792

**www.orchidtours.net**

VIVEKA PRABHA (KANNADA MONTHLY)
March 2018, Vol.18, No.03, No.of pages : 44

Registered With Registrar of News Papers Of India
under 72356/2000.postal Regn.No.KA/SK/MYS/480/
2018-20. LICENCED TO POST W.P.P.AT YADAVAGIRI
MYSORE 570 020,VIDE LICENCE NO.SK/WPP/MYS/155/2018-20



Printed at mayur graphics,Bangalore